# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಅಸೂಯೆಯೂ, ಅಸಹನೆಯೂ ಮಾನವರನ್ನು ಪಶುವಿಗೆ ಸಮಾನ ಮಾಡುತ್ತದೆಂಬುದನ್ನು ಈ ಸಂಚಿಕೆಯಲ್ಲಿರುವ "ಬದ್ಧ ಶತ್ರುಗಳು" ಎಂಬ ಕಥೆ ಸಂಕೇತಿಸುತ್ತದೆ. ಗಂಟು ಕಟ್ಟಿಸು ವಂತಹ ಧನಪಿಪಾಸೆಯಿಂದ ಏನಾಗುತ್ತದೆಂದು ತಿಳಿದು ಪಾಠ ಕಲಿಯುತ್ತಾನೆ, ತನ್ನದೇ ಹೆಸರಿನ ಕಥೆಯಾದ "ಬಡ ಸೈನಿಕ"

ಬಣ್ಣದ ಚಿತ್ರಗಳ ಧಾರಾವಾಹಿ "ಮಕರದೇವತೆ" ಈ ಸಂಚಿಕೆ ಯಲ್ಲಿ ಮುಗಿಯುವುದನ್ನು ಕಾಣುವಿರಿ. ಮುಂದಿನ ಸಂಚಿಕೆಯಲ್ಲಿ "ಮೂವರು ಮಾಂತ್ರಿಕರು" ಬಣ್ಣದ ಚಿತ್ರಗಳ ಧಾರಾವಾಹಿ ಪ್ರಾರಂಭವಾಗುತ್ತದೆ.

## ಅಮರವಾಣಿ

ವಾಕ್ಯೇನೈಕೇನ ವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್.

ಕೋಟಿಗಟ್ಟಲೆ ಗ್ರಂಥಗಳಲ್ಲಿರುವ ನೀತಿಯನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ, ಮನುಷ್ಯನು ಪರೋಪಕಾರದಿಂದ ಪುಣ್ಯವನ್ನೂ, ಪರಪೀಡನೆಯಿಂದ ಪಾಪವನ್ನೂ ಗಂಟುಕಟ್ಟಿಕೊಳ್ಳುವನು.

ಸಂಪುಟ : ೭೦ ಮೇ '೮೩ ಸಂಚಿಕೆ : ೫

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦





# ಅದೃಶ್ಯಕರಣಿ

ಅನೇಕ ವರ್ಷಗಳ ಹಿಂದೆ ಪುಷ್ಪಕ ನಗರದಲ್ಲಿ ಶಮಂತಕನೆಂಬೊಬ್ಬ ದೊಡ್ಡ ಗೃಹಸ್ಥನು, ಬಹು ದೊಡ್ಡ ಕಳ್ಳನಾಗಿದ್ದನು. ಚೋರವಿದ್ಯೆಯಲ್ಲಿ ಪಾರಂಗತನಾದ ಅವನು ರಾತ್ರಿಯ ಹೊತ್ತಿನಲ್ಲಿ ಕಳ್ಳತನವಮಾಡುತ್ತ, ಹಗಲು ಹೊತ್ತಿನಲ್ಲಿ ಬಹಳ ಮರ್ಯಾದಸ್ಥನ ಹಾಗೆ ಕಾಣಿಸುತ್ತ, ಎಲ್ಲರ ನಡುವೆ ಗೌರವಸ್ಥನಾಗಿ ಜೀವಿಸುತ್ತಿದ್ದನು. ಧನಿಕನೊಬ್ಬನು ತನ್ನ ಮಗಳು ಚಂಪಾವತಿಯನ್ನು ಅವನಿಗೆ ಕೊಟ್ಟು ಮದುವೆಯನ್ನೂ ಮಾಡಿದನು.

ಚಂಪಾವತಿ ಗುಣವತಿ, ಶೀಲವಂತೆ; ನೀತಿ ಮಾರ್ಗದಲ್ಲಿ ಜೀವಿಸಬೇಕೆಂಬ ಗುರಿಯುಳ್ಳವಳು. ತನ್ನ ಗಂಡನು ದೊಡ್ಡ ಕಳ್ಳನೆಂದು ತಿಳಿಯಲು ಅವಳಿಗೆ ಬಹುಕಾಲ ಹಿಡಿಯಲಿಲ್ಲ. ಆಗ ಅವಳಿಗಾದ ಸಂಕಟಕ್ಕೆ ತುದಿಮೊದಲಿಲ್ಲ. ಗಂಡನನ್ನು ಒಳ್ಳೇ ದಾರಿಯಲ್ಲಿ ನಡೆಯಿಸಬೇಕೆಂದು ಸಾಧ್ಯವಾದಷ್ಟು ಪ್ರಯತ್ನ ಮಾಡಿದಳಾದರೂ ಶಮಂತಕನಿಗೆ ಹೆಂಡತಿಯ ನೀತಿಗಳಾವುದೂ ಕಿವಿಗೇರಲಿಲ್ಲ.

ಕಾಲಕ್ರಮದಲ್ಲಿ ಚಂಪಾವತಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಸುಮನನೆಂದು ಹೆಸರಿಟ್ಟರು. ತಂದೆಯ ಹಾಗೆಯೇ ಮಗನು ಕೂಡಾ ಕಳ್ಳನಾಗುವನೇನೋ ಎಂದು ಚಂಪಾವತಿಗೆ ಬಹಳ ಭಯವಾಯಿತು. ಅವಳು ಚೆನ್ನಾಗಿ ಆಲೋಚನೆ ಮಾಡಿ ಮಗನಿಗೆ ಐದನೆಯ ಪ್ರಾಯ ಬಂದ ಕೂಡಲೇ ಅವನ ವಿದ್ಯಾಭ್ಯಾಸಗಳಿಗೆ ತನ್ನ ತೌರು ಮನೆಗೆ ಒಯ್ದು ಅವನನ್ನು ಅಲ್ಲೇ ಬಿಟ್ಟುಬಂದಳು. ಅದಕ್ಕಾಗಿ ಅವಳು ಬೇರೆ ಏನೋ ಕಾರಣ ಹೇಳಿದಳೇ ಹೊರತು ತನ್ನ ಗಂಡನ ಕಳ್ಳತನವನ್ನು ಕುರಿತು ಚಕಾರವೆತ್ತಲಿಲ್ಲ, ಸುಮನನು ಹದಿನೆಂಟರ ತರುಣನಾಗುವ ವರೆಗೂ ತಾತನ ಮನೆಯಲ್ಲಿಯೇ ಬೆಳೆದು ವಿದ್ಯಾನ್ವಿತನೂ ಆದನು.

ಕಳ್ಳತನದಲ್ಲಿ ಮಗನನ್ನು ತನ್ನ ಹಾಗೆಯೇ ಮಾಡಬೇಕೆಂದು ಶಮಂತಕನು ಆಶಿಸುತ್ತಿದ್ದನು. ಮಗನು ತರುಣನಾದನೆಂದು ತಿಳಿದು, ಮಗನನ್ನು ಮನೆಗೆ ಕರೆದುಕೊಂಡು ಬಂದನು.

ಚಂಪಾವತಿಗೆ ಮತ್ತೆ ಭಯ ಹಿಡಿಯಿತು. ಅವಳು ಒಂದು ದಿನ ರಹಸ್ಯವಾಗಿ ಸುಮನನನ್ನು ಕರೆದು, ಅವನ ತಂದೆ ಹೇಗೆ ಬದುಕು ನಡೆಸುವನೆಂಬುದನ್ನು ಅವನಿಗೆ ಹೇಳಿ, "ನಿನ್ನನ್ನೂ ತನ್ನ ಹಾಗೆಯೇ

ಪಳಗಿಸ ಬೇಕೆಂದು ಅವರು ಆಸೆ ಪಡುತ್ತಾರಪ್ಪಾ. ಆದಕ್ಕೆ ಹೆದರಿಯೇ ನಿನ್ನನ್ನು ಅಜ್ಜನ ಮನೆಯಲ್ಲಿ ಬಿಟ್ಟದ್ದು. ನಿನ್ನ ಅಪ್ಪನ ಹಾಗೆ ನೀನು ಕಳ್ಳನಾಗ ಬಾರದಪ್ಪಾ !" ಎಂದಳು.

"ನಾನು ಕಳ್ಳನಾಗುವುದೆ ? ಛೀ ಛೀ! ಹಾಗೆ ಸ್ವಪ್ನದಲ್ಲಿಯೂ ಎಣಿಸಬೇಡ !" ಎಂದನು ಸುಮನ.

ಇದು ನಡೆದ ಎಂಟು ದಿನಗಳ ಮೇಲೆ ಶಮಂತ ಕನು ಒಂದು ದಿನ ಮಗನೊಂದಿಗೆ ಏಕಾಂತದಲ್ಲಿ, "ನೋಡು ಮಗನೇ, ಇನ್ನು ನೀನು ಸಂಪಾದಿಸಲಿಕ್ಕೆ ತೊಡಗಬೇಕಾದ ಕಾಲ, ಹಣ ಸಂಪಾದಿಸಲಿಕ್ಕೆ ಎಷ್ಟೋ ದಾರಿಗಳಿವೆ. ಅವುಗಳಲ್ಲೆಲ್ಲಾ ಪ್ರಮುಖ ವಾದದ್ದು ಕಳ್ಳತನ ! ಅಂತಲೇ ಅದನ್ನೇ ವೃತ್ತಿಯಾಗಿ ಮಾಡಿಕೊಂಡವನು ನಾನು. ನೀನು ನನಗಿಂತಲೂ ಗಟ್ಟಿಗನಾಗಬೇಕು. ಈ ದಿನ ನನ್ನೊಂದಿಗೆ ಬಂದರೆ ಈ ವಿದ್ಯೆಯಲ್ಲಿರುವ ಗುಟ್ಟುಪಟ್ಟುಗಳನ್ನೆಲ್ಲ ತೋರಿಸಿ ಬಿಡುತ್ತೇನೆ " ಎಂದನು.

"ಬೇಡಪ್ಪಾ. ಕಳ್ಳತನ ಮಾಡಿ ಸಿಕ್ಕಿಬಿದ್ದು ಬಿಟ್ಟರೆ ಜೀವಿತದಲ್ಲಿ ಅದಕ್ಕಿಂತ ಹೆಚ್ಚಿನ ಅವಮಾನ ಯಾವುದೂ ಇಲ್ಲ. ನಾನು ಏನಾದರೂ ವ್ಯಾಪಾರ ಮಾಡುತ್ತೇನೆ, ಬಿಡಿ " ಎಂದನು ಸುಮನ.

"ಮೂರ್ಖಾ ! ವ್ಯಾಪಾರದಲ್ಲಿ ತಪ್ಪದೆ ಲಾಭ ಬರುತ್ತದೆಂದು ಕೊಳ್ಳುವುದು ಮಹಾ ಮೂರ್ಖತನ. ನನ್ನ ವಿದ್ಯೆ ಕಲಿತುಕೋ " ಎಂದನು ಶಮಂತಕ.

"ಅಪ್ಪಾ, ನಾನು ವ್ಯಾಪಾರವನ್ನೇ ಪ್ರಾರಂಭಿ ಸುತ್ತೇನೆ. ಅದು ನನಗೆ ಸರಿಹೋಗದಿದ್ದರೆ ದೊಡ್ಡ ನಷ್ಟವೇನೂ ಆಗದು. ಆಮೇಲೆ ಕಳ್ಳತನವನ್ನೇ ಮಾಡುತ್ತೇನೆ. ನಿಮ್ಮ ಮಗನಾದ ನಾನು ಅದರಲ್ಲಿ ಕಡಿಮೆಯವನೆಂದು ತಿಳಿಯಬೇಡಿ, ಕಳ್ಳತನಕ್ಕೆ ಬೇಕಾದ ಗುಟ್ಟು ಪಟ್ಟುಗಳ ಆವಶ್ಯಕತೆಯೇ ನನಗಿಲ್ಲ. ನಾನು ಅದೃಶ್ಯಕರಣಿ ಎಂಬ ವಿದ್ಯೆಯನ್ನು ಕೈಗೂಡಿಸಿ ಕೊಂಡವನು. ಆ ವಿದ್ಯೆಯಿಂದ ನಾನು ಬೇಕೆಂದಾಗ



ಇದ್ದಲ್ಲೇ ಯಾರಿಗೂ ಕಾಣದಂತೆ ಮಾಯವಾಗಿ ಬಿಡುತ್ತೇನೆ. ಆ ಸಮಯದಲ್ಲಿ ಯಾರಾದರೂ ನನ್ನ ಕೈ ಹಿಡಿದುಕೊಂಡರೆ ಅವರೂ ಮಾಯವಾಗುತ್ತಾರೆ. ಈ ವಿದ್ಯೆಯನ್ನು ಕಲಿಸಿದ ಗುರುವಿನ ಮುಂದೆ ಹೊರತು, ಯಾರ ಮುಂದಾದರೂ ಪ್ರದರ್ಶಿಸ ಬಲ್ಲೆನು " ಎಂದನು ಸುಮನ.

ಶಮಂತಕನು ಅನುಮಾನದಿಂದ, "ಇಂತಹ ತಲೆ ಹರಟೆ ನಾನು ನಂಬಲಾರೆ" ಎಂದನು.

"ಹಾಗಾದರೆ ಇವತ್ತು ರಾತ್ರಿ ನಾವಿಬ್ಬರೂ ಒಬ್ಬರು ಶ್ರೀಮಂತರ ಮನೆಗೆ ಕಳ್ಳತನಕ್ಕೆ ಹೋಗೋಣ. ಕೇವಲ ನನ್ನ ವಿದ್ಯೆಯನ್ನು ಪ್ರದರ್ಶಿಸ ಲಿಕ್ಕೆ ಮಾತ್ರವೇ ! ಅಲ್ಲಿ ಕಳ್ಳತನ ಮಾತ್ರ ಮಾಡಲೇ ಬಾರದು ! ಮಾಡಿಕೊಂಡ ಸಂಕಲ್ಪ ತಪ್ಪಿದರೆ ಫಲ ವಿಪರೀತವಾಗುತ್ತದೆ. ಈಗ ನನ್ನ ಸಂಕಲ್ಪ ನಿಮಗೆ ಆ ವಿದ್ಯೆ ಪ್ರದರ್ಶಿಸುವುದು ಮಾತ್ರವೇ ! ಈ ವಿದ್ಯೆ ಯನ್ನು ದುರ್ವಿನಿಯೋಗ ಪಡಿಸಲಾರೆನೆಂದು



ಗುರುವಿಗೆ ಮಾತು ಕೊಟ್ಟಿದ್ದೇನೆ" ಎಂದನು ಸುಮನ. ಇದಕ್ಕೆ ಶಮಂತಕನು ಒಪ್ಪಿಕೊಂಡನು. ಆ ದಿನ ರಾತ್ರಿ ತಂದೆಯೂ ಮಗನೂ ಹೊರಟರು. ಪಕ್ಕದ ನಗರದಲ್ಲಿ ಹೆಸರಾಂತ ವರ್ತಕ ವಜ್ರಗುಪ್ತನ ಮನೆಯ ಬಳಿಗೆ ಹೋಗಿ ಸುಮನನು ನಿಂತನು. ಸುಮನನು ಏನೋ ಮಂತ್ರ ಜಪಿಸಿ, ತಂದೆಯ ಕೈಯನ್ನು ಹಿಡಿದನು. ಮಂತ್ರೊಂದಿಷ್ಟು ಮಂತ್ರ ಜಪಿಸಿ, "ನೀವೇನೂ ಮಾತಾಡಬೇಡಿರಿ ಅಪ್ಪಾ, ನಾವೀಗ ಯಾರಿಗೂ ಕಾಣುವುದಿಲ್ಲ" ಎಂದನು.

ಆ ಮನೆಯ ಸುತ್ತಲೂ ಆವರಣದ ಗೋಡೆ ಇದ್ದಿತು, ಶಮಂತಕನು ಆ ಗೋಡೆಯನ್ನು ಏರಿ ಹಾರೋಣವೆಂದನು. ಸುಮನನು "ಯಾಕೆ ಆ ಕಷ್ಟ? ಒಳ್ಳೆಯ ರಾಜಮಾರ್ಗವಿರುವಾಗ?" ಎಂದನು.

ದ್ವಾರದ ಹತ್ತಿರ ಕಾವಲುಗಾರನಿದ್ದನು. ಸುಮನನೂ, ಶಮಂತಕನೂ ಒಳಗೆ ಹೋಗುವಾಗ ಅವನು ಕಂಡುಕೊಳ್ಳದೆ ತನ್ನ ಪಾಡಿಗೆ ಸುಮ್ಮನಿದ್ದನು.

ತಂದೆ ಮಗಂದಿರು ಸ್ವಲ್ಪ ಮುಂದೆ ನಡೆದು ಭವನದ ಸಿಂಹದ್ವಾರಕ್ಕೆ ಹೋದರು.

ಸುಮನನು ತೆರೆದೇ ಇದ್ದ ದ್ವಾರದ ಮೂಲಕ ಒಳಗೆ ಹೋಗುತ್ತ ತಂದೆಗೆ, "ಎಚ್ಚರ! ನನ್ನ ಕೈ ಬಿಡಬೇಡಿ!" ಎಂದು ಪಿಸುಗುಟ್ಟಿದನು.

ಒಳಗೆ ಏನೋ ಔತಣ ನಡೆಯುತ್ತಿದ್ದಿತು. ಆದರೆ ಒಬ್ಬರೂ ಆ ತಂದೆ ಮಗಂದಿರನ್ನು ಗಮನಿಸಲಿಲ್ಲ, ಸುಮನನು ತಂದೆಯನ್ನು ಭವನದೊಳಗಿನ ಎಲ್ಲಾ ಕೊಠಡಿಗಳಿಗೂ ಕರೆದೊಯ್ದನು. ಒಂದು ಕೋಣೆಯಲ್ಲಿ ನಾಲ್ಕು ದೊಡ್ಡ ದೊಡ್ಡ ಪೆಟ್ಟಿಗೆಗಳಿದ್ದುವು. ಅವುಗಳಲ್ಲಿ ಮುತ್ತು, ರತ್ನಗಳೂ, ಬಂಗಾರದ ನಗ ನಾಣ್ಯಗಳೂ, ಚೀನಿಚೀನಾಂಬರಗಳೂ ಇದ್ದುವು. ಅವುಗಳನ್ನು ನೋಡಿ ಶಮಂತಕನ ಕಣ್ಣುಗಳು ಮಿರಿಮಿರಿಗೊಂಡವು. ಸುಮನನು ತಡೆಯದಿರುತ್ತಿದ್ದರೆ ಅವನು ಅಲ್ಲಿಂದ ಏನೋ ಇಷ್ಟು ಅಪಹರಿಸದೆ ಬಿಡುತ್ತಿದ್ದಿಲ್ಲ.

ತಂದೆ ಮಗಂದಿರು ಅಲ್ಲಿಂದ ಸೀದಾ ಮನೆಗೆ ಹಿಂದಿರುಗಿದರು. ಆಗ ತಂದೆ ಮಗನೊಂದಿಗೆ, "ಅಂದ ಹಾಗೆ ನಿನ್ನ ವಿದ್ಯೆಯ ಮುಂದೆ ನನ್ನದೆಲ್ಲಾ ಬರಿದಂಡ! ಈ ವಿದ್ಯೆ ನನಗೆ ಹೇಳಿಕೊಡುವೆಯಾ?" ಎಂದು ಕೇಳಿದನು ಶಮಂತಕ.

"ಅದಕ್ಕೇನು? ಕಲಿಸಿದರಾಯಿತು" ಎಂದನು ಸುಮನ. ಆಮೇಲೆ ಸುಮನನು ಅದೃಶ್ಯಕರಣಿ ಎಷ್ಟು ಕಷ್ಟವೆಂಬುದನ್ನು ತಂದೆಗೆ ವಿವರಿಸ ತೊಡಗಿದನು.

ಆ ವಿದ್ಯೆಯನ್ನು ಕಲಿಯಬೇಕೆನ್ನುವವರು ಪ್ರತಿ ದಿನವೂ ಪುರಾಣ ಪಾರಾಯಣ ಮಾಡಬೇಕು. ನೀತಿ ಗ್ರಂಥಗಳನ್ನು ಓದಬೇಕು. ಒಂದು ಗಂಟೆ ಹೊತ್ತು ದೇವರ ಪೂಜೆ ಮಾಡಬೇಕು. ಇದನ್ನು ದಿನಾ ಒಂದೇ ಕ್ರಮದಲ್ಲಿ ಮಾಡಿದ ಮೇಲೆ, ರಾತ್ರಿ ಮಲಗುವ ಮೊದಲು ಅದೃಶ್ಯಕರಣಿ ಮಂತ್ರವನ್ನು ನೂರು ಸಾರಿ ಜಪಿಸಬೇಕು. ಹೀಗೆ ಹತ್ತು ವರ್ಷ

ಅಭ್ಯಾಸ ಮಾಡಿದರೆ ಆ ವಿದ್ಯೆ ವಶವಾಗುತ್ತದೆ. ಶಮಂತಕನು ಅದೃಶ್ಯಕರಣಿ ವಿದ್ಯೆಯನ್ನು ಸಾಧಿಸಿಕೊಳ್ಳಲು ಪಟ್ಟು ಹಿಡಿದು ಸಾಧನೆಗೆ ತೊಡಗಿದನು. ಅದಕ್ಕೆ ಬೇಕಾದ ಪುರಾಣಗಳನ್ನೂ, ಇತರ ಗ್ರಂಥಗಳನ್ನೂ ಮಗನು ಒದಗಿಸಿ ಕೊಟ್ಟನು. ಆಮೇಲೆ ಸುಮನನು ತಾಯಿಯೊಂದಿಗೆ ತಂದೆಯನ್ನು ಕುರಿತು ಹೀಗೆ ಹೇಳಿದನು :

"ಅಮ್ಮಾ, ಇನ್ನು ನಿನ್ನ ಚಿಂತೆಬಿಟ್ಟಿತು. ಹತ್ತು ವರ್ಷಗಳ ವರೆಗೂ ಅಪ್ಪ ಕಳ್ಳತನಕ್ಕೆ ಹೋಗಲಾರರು. ಈ ಕಾಲದಲ್ಲಿ ನೀತಿ ಗ್ರಂಥಗಳನ್ನೂ ಪುರಾಣಗಳನ್ನೂ ಓದುತ್ತ, ದೇವರ ಪೂಜೆ ಮಾಡಿಕೊಂಡಿರುವುದರಿಂದ ಅವರಿಗೆ ಕ್ರಮೇಣ ಕಳ್ಳತನ ಮಾಡುವುದು ತಪ್ಪು ಎಂದು ತೋರಲು ಸಾಧ್ಯವಿದೆ. ಇನ್ನು ನಾನು ವ್ಯಾಪಾರವನ್ನು ಪ್ರಾರಂಭಿಸಲು ಅಡ್ಡಿಯಿಲ್ಲ" ಚಂಪಾವತಿ ಆಶ್ಚರ್ಯದಿಂದ, "ಇದೆಲ್ಲಾ ಹೇಗೆ ಸಾಧ್ಯವಾಯಿತಪ್ಪಾ ?" ಎಂದು ಕೇಳಿದಳು.

"ಅಮ್ಮಾ, ನಾನು ತಾತನ ಮನೆಯಲ್ಲಿ ಓದಿಕೊಳ್ಳುತ್ತಿರುವಾಗ ನನಗೆ ವಜ್ರಗುಪ್ತರ ಮಗಳೊಂದಿಗೆ ಪರಿಚಯವಾಯಿತು. ಅವಳಿಗೆ ನಾನೆಂದರೆ ಬಹಳ ಇಷ್ಟ, ಅವರ ಮನೆಗೆ ನಾನು ಆಗಾಗ ಹೋಗುವುದರಿಂದ ಅಲ್ಲಿನವರೆಲ್ಲಾ ನನ್ನ ಪರಿಚಿತರೇ. ನನ್ನ ಅಪ್ಪನನ್ನು ಒಪ್ಪಿಸಲು ಅಲ್ಲಿಯ ಐಶ್ವರ್ಯವು ಕಾಣುವ ಹಾಗೆ ಮಾಡುವಂತೆ, ಯಾರೂ ನಮ್ಮನ್ನು ಮಾತಾಡಿಸದಂತೆ ಅವಳ ಮೂಲಕ ಏರ್ಪಡಿಸಿಟ್ಟಿದ್ದೆ. ಅಪ್ಪ ಅದನ್ನೆಲ್ಲಾ ನನ್ನ ಅದೃಶ್ಯಕರಣಿಯಿಂದ ನೋಡಿದೆನೆಂದುಕೊಂಡಿದ್ದಾರೆ" ಎಂದು ಎಲ್ಲವನ್ನೂ ಹೇಳಿದನು.

"ನಿನ್ನ ತಂದೆ ಕಳ್ಳರೆಂದು ಅವರಿಗೆ ಗೊತ್ತಾಗಿಲ್ಲವಷ್ಟೆ ?" ಎಂದು ಚಂಪಾವತಿ ಭೀತಿಯಿಂದ ಕೇಳಿದಳು.

"ಇಲ್ಲಮ್ಮಾ, ಈಗ ನಾನೇ ಕಳ್ಳನಾದೆನೆಂದು ತಂದೆಯೊಡನೆ ಹೇಳಿ, ಆ ದಿನ ಹೊಕ್ಕ ಮನೆಯೊಳಗಿದ್ದ ಹುಡುಗಿಯನ್ನು ನಾನು ನೋಡಿ ಅವಳನ್ನು ಕದಿಯುವ ಮನಸ್ಸು ಮಾಡಿದ್ದೇನೆಂದು ಹೇಳಿದರೆ, ತಂದೆಯೂ ನೀನೂ ಹೆಣ್ಣು ಕೇಳಲು ಹೋಗಬಹುದು" ಎಂದನು ಕುಮಾರ ಸುಮನ.

"ಎಲಾ ಕಳ್ಳ ಮಗನೇ!" ಎಂದಳು ತಾಯಿ ಚಂಪಾವತಿ ನಗುತ್ತ. ಮಗನ ಈ ಒಳಗುಟ್ಟನ್ನು ತಿಳಿದು ತಂದೆಯೂ. "ಎಲಾ ಕಳ್ಳಾ!" ಎಂದಾಗ, "ಇದು ಕಳ್ಳತನ ಹೇಗಾದೀತು ? ನಾವೀಗ ಎಲ್ಲರ ಹಾಗೆಯೇ ಹುಡುಗಿಯನ್ನು ಕೇಳಲು ಹೋಗುತ್ತೇವಲ್ಲಾ !" ಎಂದನು.

ಮದುವೆಯಾದ ಮೇಲೆ, ವ್ಯಾಪಾರದ ಪಟ್ಟುಗಳನ್ನು ಮಾವನಿಂದ ಕಲಿತು ಸುಮನನು, ವ್ಯಾಪಾರದಲ್ಲಿ ಅಭಿವೃದ್ಧಿಗೆ ಬಂದನು.



# ಕಾಣದೆ ಹೋದ ಕರು

**ಸೋ**ಮಾರಿಯಾಗಿ ತಿರುಗುವ ಎಲ್ಲಪ್ಪ ಒಂದು ತೆಂಗಿನ ತೋಟದ ಬದಿಯಿಂದಾಗಿ ನಡೆಯುವಾಗ, ಮರದ ಮೇಲೆ ಸೀಯಾಳವಿರುವುದನ್ನು ನೋಡಿದನು. ಸುತ್ತಮುತ್ತ ಯಾರೂ ಕಾಣಲಿಲ್ಲ. ಅದುದರಿಂದ ಧೈರ್ಯಗೊಂಡು ಕದ್ದುಕೊಳ್ಳಲಿಕ್ಕಾಗಿ ಮರವನ್ನು ಏರ ತೊಡಗಿದನು.

ಅದನ್ನು ನೋಡಿ ಎಲ್ಲಿಯೋ ಇದ್ದ ಕಾವಲುಗಾರನು ಅಲ್ಲಿಗೆ ಓಡುತ್ತಾ ಬಂದು, "ಯಾರೋ ಅದು, ಮರ ಹತ್ತುವುದು ? ಇಳೀ ಕೆಳಗೆ ! ನಡೀ ನಮ್ಮ ಯಜಮಾನ್ರ ಹತ್ತಿರ !" ಎಂದು ಕೂಗಿ ಹೇಳಿದನು. ಕೂಡಲೇ ಎಲ್ಲಪ್ಪ ಇಳಿಯಲು ತೊಡಗಿದನು.

ಎಲ್ಲಪ್ಪ ಇಳಿಯುತ್ತಾ ಏನೂ ಹೆದರದೆ, "ಏರುವುದು ಆಗಿಹೋಯ್ತು. ಇಳೀತಾ ಇದ್ದೇನೆ, ಕರು ಮಾತ್ರ, ಮರದ ಮೇಲಿಲ್ಲ !" ಎಂದನು.

"ಮರದ ಮೇಲೆ ಕರು ಎಂಥದೋ ? ಬುದ್ಧಿ ನೆಟ್ಟಗಿದೆಯೋ ನಿನಗೆ ?" ಎಂದನು ಕಾವಲುಗಾರ.

"ನಿಮ್ಮ ಮಾತು ಕೇಳಿದರೆ ನೀವು ನನ್ನ ಯಜಮಾನರಿಗಿಂತಲೂ ಹೆಚ್ಚು ಬುದ್ಧಿವಂತರಾಗಿ ಕಾಣ್ತೀರಿ. ಅವರು ಕಾಣದೆ ಹೋದ ಕರುವನ್ನು ಹೊಲ ತೋಟ ಮರಮಟ್ಟು ಗಿಡಗಂಟೆಗಳಲ್ಲೆಲ್ಲಾ ಹುಡುಕಿ ಬಾ ಅಂದರು. ನಾನು ಹೇಳಿದರೆ ನಂಬಲಾರರು. ನೀವು ಸ್ವಲ್ಪ ನನ್ನ ಯಾಜಮಾನರ ಹತ್ತಿರ ಬಂದು ನಾನು ಕರುವನ್ನು ಮರಗಳಲ್ಲೆಲ್ಲಾ ಹುಡುಕಿದ್ದು ನಿಜವೆಂದು ಸಾಕ್ಷಿ ಹೇಳ್ತೀರಾ ? ನಿಮ್ಮ ಋಣ ಹೇಗೋ ತೀರಿಸುತ್ತೇನೆ !" ಎಂದನು ಎಲ್ಲಪ್ಪ.

ಇವನೊಬ್ಬ ಮೂಢಾತ್ಮನೆಂದುಕೊಂಡು ಕಾವಲಿನವನು ಎಲ್ಲಪ್ಪನನ್ನು ತನ್ನ ಗುಡಿಸಲಿಗೆ ಒಯ್ದು, ಊಟ ಹಾಕಿಸಿ ಕಳುಹಿಸಿದನು.

ಕಳ್ಳನೆಂಬ ಹೆಸರಿಗಿಂತ ಮೂರ್ಖ ಹೆಸರೇ ವಾಸಿ !






## ೧೮

[ಉಪ್ಪು ನೀರು ನದಿಗಳ ಕುದುರಿನಲ್ಲಿ ಸಮುದ್ರಕೇತನ ಕಡೆಯ ಕಳ್ಳರನ್ನು ವಜ್ರಮುಷ್ಟಿ ಹತಮಾಡಿದನು. ತರುವಾಯ ಸಮುದ್ರಕೇತನು ಸೇರಿಕೊಂಡಿರುವ ಚಿಕ್ಕ ದ್ವೀಪದ ಕಡೆಗೆ ಶಿವದತ್ತ ಮೊದಲಾದವರು ಹೋದರು. ಅಲ್ಲಿ ಸಮುದ್ರಕೇತನಿಂದ ಬಂಧಿಸಲ್ಪಟ್ಟ ಅನೇಕಮಂದಿಗಳೊಂದಿಗೆ ತಾವು ಅವರನ್ನು ರಕ್ಷಿಸಲು ಬಂದವರೆಂಬುದನ್ನು ಹೇಳಿ, ಅವರೆಲ್ಲರನ್ನೂ ಬಿಡಿಸಿದರು. ಬಳಿಕ ಎಲ್ಲರೂ ಸೇರಿ ಥಕ್ಕನೆ ಸಮುದ್ರಕೇತನ ಗುಂಪಿನ ಮೇಲೆ ಬಿದ್ದರು.]

ವಜ್ರಮುಷ್ಟಿಯ ಮೃತ್ಯುದೃಷ್ಟಿ ಸಮುದ್ರಕೇತನ ಮೇಲೆಯೇ ಇದ್ದುದರಿಂದ, ಉಳಿದ ಕಳ್ಳರನ್ನೆಲ್ಲಾ ಬೇರೆಯವರ ಬಲಿಗೆ ದೂಡಿಯೂ, ತಳ್ಳಿಯೂ, ಸಮುದ್ರಕೇತನ ಇದಿರಿಗೆ ಹಾರಿ, ತನ್ನ ಕತ್ತಿಯಿಂದ ಒಂದೇಟುಕೊಟ್ಟನು. ಆ ಪೆಟ್ಟಿನ ಶಕ್ತಿ ಎಷ್ಟರ ಮಟ್ಟಿನದೆಂದರೆ ಅದರ ಆ ಒಂದೇ ಏಟಿಗೆ ಸಮುದ್ರಕೇತನ ಕತ್ತಿ ನಾಲ್ಕಾರು ತುಂಡುಗಳಾಗಿ ಮುರಿದು ಖಣಖಣನೆ ಕೆಳಗೆ ಬಿತ್ತು. ಸುತ್ತಲಿದ್ದವರು ಭೀಕರವಾಗಿ ಹೋರಾಟ ನಡೆಸುತ್ತಿರಲು, ವಜ್ರಮುಷ್ಟಿ ಸಮುದ್ರಕೇತರ ಯುದ್ಧದ ರೀತಿಯೇ ಬೇರೆಯಾಯಿತು.

ಸಮುದ್ರಕೇತನ ಕತ್ತಿಯನ್ನು ಮುರಿದಕೂಡಲೇ ವಜ್ರಮುಷ್ಟಿ ತನ್ನ ಕತ್ತಿಯನ್ನೂ ಬಿಸುಟು, "ಎಲೋ! ಮೃಗಕ್ಕಿಂತ ಕ್ರೂರನಾದ ಸಮುದ್ರಚೋರಾ! ನಿನ್ನನ್ನು ಮೃಗದ ಹಾಗೆ ಆಯುಧವೇನಿಲ್ಲದೆ ಕೊಲ್ಲುತ್ತೇನೆಂಬುದೇ ನನ್ನ ಪ್ರತಿಜ್ಞೆ! ಅದು ನೆರವೇರುವ ದಿನವೇ ಈ ದಿನ! ಇದೇ ನಿನ್ನ ಕಡೇ ದಿನ! ಕಡೇ ಕ್ಷಣ!" ಎನ್ನುತ್ತಾ, ಸಮುದ್ರಕೇತನ ನಡು ಪಟ್ಟಿಯನ್ನು ಹಿಡಿದು ಎಳೆದು ಕಾಲ್ತಪ್ಪಿಸಿ ಚಾಪೆಯ ಸುರುಳಿಯಂತೆ ನೆಲಕ್ಕೆ ಕೆಡವಿದನು. ಮೃಗದಂತೆ ಮೇಲೆ ಬಿದ್ದು ನೆಲಕ್ಕೆ ಕೆಡವಲ್ಪಟ್ಟ ಪೆಟ್ಟಿನಿಂದ ಸಮುದ್ರಕೇತನು ಧಿಮ್ಮರ




ಗೊಂಡು "ಅಬ್ಬಾ" ಎಂದು ಕೂಗಿದನು. ಏಳಲು ಹವಣಿಸುವಾಗ ವಜ್ರಮುಷ್ಟಿ ಅವನ ಮೇಲೆಯೇ ಬಿದ್ದು, ಬಲವಾದ ಕೈಗಳಿಂದ ಕಂಠವನ್ನು ಬಿಗಿ ಹಿಡಿದನು. ವಜ್ರಮುಷ್ಟಿಯ ಹಲ್ಲುಗಳು ಕಟಕಟಿಸಿದುವು. "ಪಾಪಾತ್ಮಾ! ಇದೇ ನಿನಗೆ ತಕ್ಕ ಪ್ರಾಯಶ್ಚಿತ್ತ!" ಎಂದು ಹೇಳುತ್ತಾ ವಜ್ರಮುಷ್ಟಿ ಸಮುದ್ರಕೇತನ ಕಂಠವನ್ನು ಹಿಚಿಕಿಕೊಂಡಿರಲು, ಅವನ ಕೈ ಕಾಲುಗಳ ಚಡಪಡಿಕೆ ನಿಂತುವು. ಆಗಿನ ಅವನ ಮುಖ ವಿಕಾರಗಳನ್ನು ನೋಡಲಾಗದಂತೆ ವಜ್ರಮುಷ್ಟಿ ಎದ್ದು ಕಾಲಿನಿಂದ ಅವನನ್ನು ಒದ್ದು ಜಾಡಿಸಿದನು. ಅಲ್ಲಿಗೆ ಮುಗಿಯಿತು ಸಮುದ್ರಕೇತನ ಕತೆ.

ಸ್ವಲ್ಪ ಹೊತ್ತಿಗೆಲ್ಲಾ ಶಿವದತ್ತ ಮಂದರದೇವ ಮತ್ತು ಇತರರ ಪೆಟ್ಟುಗಳಿಂದ ಸಮುದ್ರಚೋರರ ತೋಳಿಯವರನೇಕರು ಸತ್ತು, ಉಳಿದವರು ಆಯುಧಗಳನ್ನು ಕೆಳಗೆ ಹಾಕಿ, ಕೈ ಜೋಡಿಸಿ ಶರಣು ಶರಣೆಂದು ಕೂಗಿದರು. ಶಿವದತ್ತನ ಕಡೆಯವರು ಅವರನ್ನೆಲ್ಲಾ ಬಂಧಿಸಿ ಸಾಲಾಗಿ ನಿಲ್ಲಿಸಿದರು. ಅದುವರೆಗೂ ಆಕಸ್ಮಿಕವಾದ ಈ ಹೋರಾಟವನ್ನು ಹೇಗೆ ನಿಲ್ಲಿಸುವುದೆಂದು ತಿಳಿಯದೆ, ದೂರ ಸರಿದು ನಿಂತು ನೋಡುತ್ತಿದ್ದ ಹರಿಶಿಖಿರಾಜನ ಭಟರು, ಎಲ್ಲಾ ಮುಗಿದ ಮೇಲೆ ಮುಂದೆ ಬಂದು, "ಏನಿದೆಲ್ಲಾ? ಯಾರು ನೀವು? ಹೀಗೇಕೆ ಮಾಡಿದಿರಿ?" ಎಂದು ಕೋಪಮಿಶ್ರಿತ ಸ್ವರದಿಂದ ಶಿವದತ್ತನನ್ನು ನೋಡಿ ಕೇಳಿದರು.

"ಹಾಗೆ ಕೇಳಿರಿ. ಏನೂ ಕೇಳದೆ ದುಡುಕದಿರುವ ನೀವುಗಳು ವಿವೇಕಿಗಳೆಂದು ಗೊತ್ತಾಗುತ್ತದೆ. ನಾವು ಯಾರೆಂದರೆ" ಎಂದು ಶಿವದತ್ತನು ತಮ್ಮ ವಿಷಯವನ್ನು ಅವರೊಂದಿಗೆ ಹೇಳಿ, "ನೀವು ಯಾರೆಂಬುದನ್ನೂ ಸ್ವಲ್ಪ ಮಟ್ಟಿಗೆ ಅರಿತಿದ್ದೇವೆ. ನಾವು ನಿಮ್ಮ ಮಕರಮಂಡಲದ ರಾಜನಾದ ಹರಿಶಿಖಿಗೆ ಮಿತ್ರರಾದವರೆಂದೇ ತಿಳಿಯಿರಿ. ನೀವು ಒಂದು ಮೊಸಳೆಯನ್ನು ದೇವತೆಯಾಗಿ ಪೂಜಿಸಿ, ಅದಕ್ಕೆ ಮನುಷ್ಯರ ಬಲಿಯನ್ನು ಕೊಡುವ ಸಂಪ್ರದಾಯವಿಟ್ಟುಕೊಂಡಿದ್ದೀರಂತೆ. ಆ ಪಿಶಾಚಿ ಮೊಸಳೆಯನ್ನು ಹತಮಾಡುವ ಪಿಶಾಚಶಕ್ತಿಯ ವ್ಯಕ್ತಿ ನಮ್ಮಲ್ಲಿದ್ದಾನೆ. ಇವನೇ! ಇವನಿಗೆ ಆ ಮೊಸಳೆಯ ಬಲಿಯೇ ಬೇಕಂತೆ" ಎಂದು ವಜ್ರಮುಷ್ಟಿಯನ್ನು ತೋರಿಸಿದನು.

ಆ ಭಟರು ತಲೆದೂಗಿ, "ಪ್ರಜೆಗಳ ಇಷ್ಟದಂತೆ ಮಹಾರಾಜರು ಮಾಡಬೇಕಾಗಿ ಬಂದಿದೆ. ಯಾವುದಕ್ಕೂ ನಮ್ಮ ಮಹಾರಾಜರೊಡನೆ ನೀವು ಮಾತಾಡಬೇಕು" ಎಂದು ಭಟರು ಶಿವದತ್ತ ಮೊದಲಾದವರನ್ನು ಮಕರಮಂಡಲಕ್ಕೆ ಕರೆದುಕೊಂಡು ಹೋದರು.

ಭಟರಿಂದ ಸಂಗತಿ ತಿಳಿದು ಹರಿಶಿಖಿರಾಜನು, ಶಿವದತ್ತ, ಮಂದರದೇವಾದಿಗಳನ್ನು ಗೌರವದಿಂದ ಸ್ವಾಗತ ಮಾಡಿ, "ನೀವು ನಮ್ಮ ಭಟರೊಂದಿಗೆ ಹೇಳಿದ ಹಾಗೆ ಮಕರದೇವತೆಯನ್ನು ಕೊಲ್ಲುವವನು ಯಾರು? ಎಲ್ಲಿದ್ದಾನೆ? ಅದು ನಿಜಕ್ಕೂ ದೇವತೆಯೋ

ಬರಮಾರಿ ಮೊಸಳೆಯೋ ಎಂಬುದನ್ನು ತಿಳಿಯ ಬೇಕೆಂದು ನನಗೂ ಕುತೂಹಲವಿದೆ" ಎಂದು ತನ್ನ ಆತುರವನ್ನು ಪ್ರಕಟಿಸಿದನು.

ಆಗ ವಜ್ರಮುಷ್ಟಿ ಮುಂದೆ ಬಂದು, "ಮಹಾ ರಾಜರೇ, ನಾನು ಚಿಕ್ಕಂದಿನಿಂದಲೂ ಶಮನದ್ವೀಪದಲ್ಲಿ ಮೊಸಳೆಗಳ ಬೇಟೆಯಾಡಿಕೊಂಡಿದ್ದವನು. ನೀವು ದಯ ಮಾಡಿ ನನಗೆ ಆ ಮೊಸಳೆ ಇರುವ ಸ್ಥಳವನ್ನು ತೋರಿಸಿದರೆ ಸಾಕು. ನಾನು ಕಣ್ಣು ಮುಚ್ಚಿ ತೆರೆಯುವುದರೊಳಗೆ ಅದನ್ನು ಕೊಂದುಬಿಡುತ್ತೇನೆ" ಎಂದನು ವಿನಯದಿಂದ.

ವಜ್ರಮುಷ್ಟಿಯ ಮಾತುಗಳನ್ನು ಕೇಳಿ ಹರಿಶಿಖಿ ರಾಜನು ಸಣ್ಣಗೆ ನಕ್ಕು, "ಆ ಮೊಸಳೆಯನ್ನು ಮೂರ್ಖರಾದ ಅನೇಕಮಂದಿ ಪ್ರಜೆಗಳು ಈ ಮಂಡಲಾಧಿದೇವತೆ ಎಂದು ಪೂಜಿಸುತ್ತಿದ್ದಾರೆ. ಅಂತಲೇ ಅದನ್ನು ನೋಡಿ ಎಲ್ಲರೂ ಹೆದರುವರು. ನಿನ್ನಂತಹ ಕುಳ್ಳ ಮನುಷ್ಯನೊಬ್ಬನು ಬಂದು ಅದನ್ನು ಬಲಿ ತೆಗೆದುಕೊಳ್ಳುವನೆಂದೂ, ಅವನಿಗಾಗಿ ಅದನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದೂ, ಅದುವರೆಗೆ ಮಕರಮಂಡಲಾಧಿದೇವತೆ ಅದನ್ನು ಆವಹಿಸಿಕೊಂಡಿರುವಳೆಂದೂ ಒಬ್ಬ ದೈವಜ್ಞನು ಹೇಳಿದಂತೆಯೂ ಪ್ರವಾದವಿದೆ. ಅದಕ್ಕೆ ಸರಿ ಯಾಗಿಯೇ ನೀನು ಕಾಣುವೆ. ನಿನ್ನ ಶಕ್ತಿ ಸಾಮರ್ಥ್ಯ ಗಳನ್ನು ನೋಡಬೇಕೆಂದು ನನಗೂ ಕುತೂಹಲವಿದೆ" ಎಂದನು.

ಶಿವದತ್ತನು ರಾಜನ ಮಾತನ್ನು ಅನುಮೋದಿಸಿ ಕೊಂಡಂತೆ ತಲೆದೂಗಿ, "ಮಹಾರಾಜಾ! ಈ ಮೊಸಳೆಯ ಅಪಾಯದಿಂದ ನಿಮ್ಮೆಲ್ಲರನ್ನೂ ನಾವು ಕಾಪಾಡುತ್ತೇವೆ. ಇದರಿಂದ ನಿಮ್ಮ ಪ್ರಜೆಗಳಿಗೆ ಕ್ಷೇಮ ವಾಗಿ ನಿಮಗಿರುವ ಕೆಟ್ಟ ಹೆಸರೂ ಹೋಗುತ್ತದೆ. ಇದಕ್ಕೆ ಪ್ರತಿಯಾಗಿ ನಿಮ್ಮಿಂದ ನಾವೊಂದು ಸಹಾಯ ವನ್ನು ಕೇಳಬಹುದೆ? ಅದನ್ನು ಮೊದಲೇ




ತಿಳಿದು ಬಿಟ್ಟರೆ, ನಮಗೆ ಇಮ್ಮಡಿ ಉತ್ಸಾಹ ಬಂದೀತು. ಅಪ್ಪಣೆಯಾದರೆ ಹೇಳುವೆನು" ಎಂದನು.

ಹರಿಶಿಖಿನು ನಗುತ್ತ, "ಸಹಾಯವೇ? ಅಗತ್ಯ ವಾಗಿ ಕೇಳಿರಿ. ಎಂತಹ ಸಹಾಯವಾದರೂ ಮಾಡು ತ್ತೇನೆ. ಮಕರದೇವತೆ ಎಂದು ಕರೆಯಲ್ಪಡುವ ಈ ಮಕರ ಪಿಶಾಚಿಯಿಂದ ಬಿಡುಗಡೆಯಾದರೆ, ಎಷ್ಟೋ ಧನವು ಉಳಿದು ಹೋಗುತ್ತದೆ. ನನ್ನ ಪ್ರಜೆಗಳ ಮೂಢವಿಶ್ವಾಸದಿಂದ ಅದರ ಬಲಿಗೆ ಹಿಡಿಸಿ ತರುವ ಮನುಷ್ಯರಿಗಾಗಿ ನಾನು ಮಾಡುವ ಖರ್ಚು, ಬೇಗದಲ್ಲೇ ನನ್ನ ಖಜಾನೆ ಬರಿದಾಗುವಂಥಾದ್ದೇ" ಎಂದನು. ಆಗ ಶಿವದತ್ತನು ಹರಿಶಿಖಿಗೆ, ಕುಂಡಲಿನೀ, ಮರಾಳದ್ವೀಪಗಳ ವೃತ್ತಾಂತವನ್ನೆಲ್ಲಾ ಹೇಳಿ, "ನಿಮಗೆ ದೊಡ್ಡ ನಾವಿಕಾದಳವಿದೆಯೆಂದು ಕೇಳಿದ್ದೇನೆ. ನಮ್ಮ ದೇಶಗಳನ್ನು ಕ್ರೂರರ ಪರಿಪಾಲನೆಯಿಂದ ರಕ್ಷಿಸಲು ನಿಮ್ಮಿಂದ ನಮಗೆ ಸಹಾಯವಾಗಬೇಕು". ಎಂದನು. ಹರಿಶಿಖಿನು ಒಪ್ಪಿದನು.



ಆ ರಾತ್ರಿ ಶಿವದತ್ತನಿಗೂ ಅವನ ಅನುಚರರಿಗೂ ಹರಿಶಿಖ ರಾಜನು ಭಾರಿ ಔತಣ ಮಾಡಿಸಿದನು. ಮಕರಮಂಡಲದೊಳಗಿನ ಎಲ್ಲಾ ಪ್ರಾಂತದವರಿಗೂ ಮಕರದೇವತೆಯ ಅವತಾರ ಸಮಾಪ್ತಿಯ ಸಮಾರಂಭ ನೋಡಲು ಬರುವಂತೆ ಆಮಂತ್ರಣ ಕಳುಹಿಸಿದನು. ಎಷ್ಟೋ ಕಾಲದಿಂದ ಇದಿರು ನೋಡುತ್ತಿರುವ ಕುಬ್ಜಾವತಾರದವನು ಬಂದಿದ್ದಾನೆಂದೂ, ಅವನು ಬಲಿ ತೆಗೆದುಕೊಳ್ಳುವ ಮಕರಜಲ ದೇವತೆಯನ್ನು ನೋಡಲು ಬರಬೇಕೆಂದೂ ಉಳಿದ ಕಡೆಗಳಿಗೆಲ್ಲ ಡಂಗುರದ ಮೂಲಕ ತಿಳಿಸಲಾಯಿತು.

ಮರುದಿನ ನಡುಮಧ್ಯಾಹ್ನದ ವೇಳೆಯಲ್ಲಿ ಮಕರ ಮಂಡಲ ವಾಸಿಗಳೆಲ್ಲಾ ಮೊಸಳೆಯ ವಾಸಸ್ಥಳದ ಸುತ್ತಲೂ ಗುಂಪು ಗೂಡಿದರು. ಅಲ್ಲಿರುವ ಒಂದು ಬೆಟ್ಟದ ಶಿಖರದಿಂದ ಕೆಳಗೆ ನೋಡಿದರೆ, ತಳದಲ್ಲಿ ಹರಿಯುತ್ತಿರುವ ನದಿಯೊಂದು ಕಾಣುತ್ತದೆ. ಆ ನದಿಯ ಬದಿಯ ಒಂದು ಗವಿಯೊಳಗೆ ಆ ಮೊಸಳೆ ವಾಸವಾಗಿರುತ್ತದೆ. ಆ ಗುಹೆಯ ವಠಾರದಲ್ಲಿ ಆ ನದಿ ಒಂದು ಸರೋವರದಂತೆ ಅಗಲವಾಗಿ ಕಾಣುತ್ತದೆ.

ವಜ್ರಮುಷ್ಟಿ ಒಂದಡಿ ಉದ್ದವಿರುವ ಎರಡು ಕತ್ತಿಗಳನ್ನು ತನ್ನ ಎರಡು ಮುಷ್ಟಿಗಳೊಳಗೆ ಅವುಗಳ ಹಿಡಿಕೆಯೊಂದಿಗೆ ಹಗ್ಗದಿಂದ ಬಲವಾಗಿ ಬಿಗಿಸಿಕೊಂಡನು, ಹಾಗೆ ತನ್ನ ಮುಷ್ಟಿಗಳನ್ನು ಗಟ್ಟಿ ಮಾಡಿಕೊಂಡು, ಎಲ್ಲರೂ ನೋಡುತ್ತಿರುವಂತೆ, ಬೆಟ್ಟದ ಅರ್ಧದಷ್ಟು ಕೆಳಗಿಳಿದು, ನದಿಯ ಸರೋವರದ ನಡುವಿಗೆ ಧುಮುಕಿದನು. ಮುಳುಗಿ ಎದ್ದು ಮೊಸಳೆಯ ಗುಹೆಯ ಕಡೆಗೆ ಈಜಿ ಹೋಗ ತೊಡಗಿದನು.

ವಜ್ರಮುಷ್ಟಿ ಗುಹೆಯನ್ನು ಸಮೀಪಿಸುವುದರೊಳಗೆ, ಕಣ್ಣುಗಳಿಂದ ಬೆಂಕಿಯ ಕಿಡಿಗಳನ್ನುಗುಳುತ್ತ, ಮಹಾ ಮೊಸಳೆ ಅವನ ಕಡೆಗೇ ಹಾಯ್ದು ಬಂತು. ವಜ್ರಮುಷ್ಟಿ ಇದ್ದಲ್ಲೇ ಸ್ಥಿರವಾಗಿ ನಿಂತು. ಅದರ ತೆರೆದ ಬಾಯಿಗೆ ಎರಡು ಕಡೆಗಳಲ್ಲಿರುವ ಮುಷ್ಟಿಗಳ ಕತ್ತಿಯನ್ನು ಹಿಡಿದುಕೊಂಡು ಕೈಗಳನ್ನು ಅಗಲಿಸಿದನು. ಆ ಕತ್ತಿಗಳು ಮೊಸಳೆಯ ದವಡೆಗಳ ಎರಡು ಬದಿಗಳನ್ನೂ ಸೀಳಿಕೊಂಡೇ ಹೋದುವು. ಅದು ನೋವಿನಿಂದ ವಜ್ರಮುಷ್ಟಿಯನ್ನು ಎಳೆದುಕೊಂಡೇ ಆಚೆಗೂ ಈಚೆಗೂ ಹೊರಳಾಡ ತೊಡಗಿತು. ಬಾಲವನ್ನು ಎತ್ತಿಬೀಸಿ ಹೊಡೆಯಲು ಪ್ರಯತ್ನಿಸ ತೊಡಗಿತು.

ವಜ್ರಮುಷ್ಟಿ ಫಕ್ಕನೆ ಒಂದು ಕೈಯಿಂದ ಒರೆಯಲ್ಲಿದ್ದ ದೊಡ್ಡ ಕತ್ತಿಯನ್ನು ಸೆಳೆದು ಮೊಸಳೆಯನ್ನು ತಿವಿಯುತ್ತಾ, ಅದರ ಬಾಲದ ಪೆಟ್ಟನ್ನು ತಪ್ಪಿಸಿಕೊಳ್ಳುತ್ತಾ, ಎರಡು ಗಂಟೆಯ ವರೆಗೆ ಅದರೊಂದಿಗೆ ಹೋರಾಡಿ, ಪೂರ್ಣಶಕ್ತಿ ಕಳೆದುಕೊಂಡು ಕೊನೆಯುಸಿರಾಗಿದ್ದ ಆ ಮೊಸಳೆಯನ್ನು ತೀರಕ್ಕೆ ಎಳೆದು ಹಾಕಿದನು.

ಬೆಟ್ಟದ ಶಿಖರದಲ್ಲಿ ಈ ಭಯಂಕರ ಹೋರಾಟವನ್ನು ಹರಿಶಿಖರಾಜನೂ, ಪ್ರಜೆಗಳೂ ನೋಡಿದರು.



ಮೊಸಳೆಯ ಮರಣವನ್ನು ನೋಡಿ ಜಯಜಯವೆಂದು ಘೋಷಣ ಮೆಚ್ಚಿಸಿದರು. ಆಮೇಲೆ ಒಂದು ವಾರದ ವರೆಗೆ ಮಕರಮಂಡಲದಲ್ಲಿ ಆನಂದೋತ್ಸವಗಳೇ!

ಹರಿಶಿಖಿನು ತಾನು ಮಾಡಿದ ವಾಗ್ದಾನದ ಪ್ರಕಾರ ಶಿವದತ್ತನಿಗೆ ದೊಡ್ಡ ನಾವಿಕಾ ಬಲವನ್ನೂ, ಇಪ್ಪತ್ತು ಸಾವಿರಮಂದಿ ಸೈನಿಕರನ್ನೂ ಒಪ್ಪಿಸಿಕೊಟ್ಟನು. ಒಂದು ಶುಭಮುಹೂರ್ತದಲ್ಲಿ ಶಿವದತ್ತನೂ, ಮಂದರ ದೇವನೂ, ಮರಾಳ ಮತ್ತು ಕುಂಡಲಿನೀದ್ವೀಪ ರಾಜ್ಯಗಳನ್ನು ವಶಪಡಿಸಿಕೊಳ್ಳಲು ಪ್ರಯಾಣ ಹೊರಟರು. ಅವರೊಂದಿಗೆ ದೇವಮಾಯಿಯೂ, ಸ್ವಯಂಪ್ರಭೆಯೂ ಇದ್ದರು. ಸ್ವಯಂಪ್ರಭೆ ಶಮನ ದ್ವೀಪ ರಾಜಕುಮಾರಿ ಎಂಬ ಸಂಗತಿಯನ್ನು ಈಗ ದೇವಮಾಯಿ ಶಿವದತ್ತನೊಂದಿಗೆ ಹೇಳಿದಳು.

ಶಿವದತ್ತನು ಈ ಶುಭಸಂಗತಿಯನ್ನು ಕುರಿತು ಶಮನದ್ವೀಪದ ರಾಜನಿಗೆ ರಾಯಭಾರ ಕಳುಹಿಸಿದನು. ಸ್ವಯಂಪ್ರಭೆಗೆ ಮಂದರದೇವನೊಂದಿಗೆ ವಿವಾಹ ಮಾಡಿಸಿದರೆ ಆ ಮೂರು ರಾಜ್ಯಗಳಿಗೂ ಶ್ರೇಯಸ್ಸಾಗುವುದೆಂದು ಶಿವದತ್ತನ ಉದ್ದೇಶ.

ಕಳ್ಳರಿಂದ ಅಪಹರಿಸಲ್ಪಟ್ಟ ತನ್ನ ಕುಮಾರಿಯನ್ನು ಇನ್ನು ಮೇಲೆ ನೋಡುವ ಆಶೆಯಿಲ್ಲವೆಂದು, ಶೋಕದಲ್ಲಿ ಮುಳುಗಿದ್ದ ಶಮನರಾಜನು, ಆ ಶುಭ ವಾರ್ತೆಯನ್ನು ಕೇಳಿ ಜೀವಪಡೆದಂತಾದನು. ತನ್ನ ಕುಮಾರಿ ಕ್ಷೇಮವಾಗಿರುವಳೆಂದೂ, ಅವಳನ್ನು ಮರಾಳದ್ವೀಪದ ರಾಜನಾದ ಮಂದರದೇವನು ವಿವಾಹ ಮಾಡಿಕೊಳ್ಳಲು ಆಶಿಸುವನೆಂದೂ ರಾಯಭಾರಿಯ ಮೂಲಕ ತಿಳಿದು ಶಮನರಾಜನು ಇನ್ನಿಷ್ಟು ಸಂತೋಷಪಟ್ಟನು. ಅವನು ಕೂಡಾ ಸ್ವಲ್ಪ ನಾವಿಕ ಬಲದೊಂದಿಗೆ ಸೈನಿಕ ಬಲವನ್ನೂ ಕೂಡಿಸಿ ಆಗಲಿರುವ ಅಳಿಯನ ಸಹಾಯಕ್ಕಾಗಿ ಹೊರಟನು.

ಗೂಢಚಾರರಿಂದ ತನ್ನ ಮೇಲೆ ಬರಲಿರುವ ಈ ದಾಳಿಯನ್ನು ಕುರಿತು ನರವಾಹನನು ತಿಳಿದು ಭಯ ದಿಂದ ದಿಕ್ಕುತೋರದೆ ನಡುಗಿದನು. ಮರಾಳ ಮತ್ತು ಕುಂಡಲಿನೀ ದ್ವೀಪಗಳನ್ನು ರಕ್ಷಿಸಿಕೊಳ್ಳುವುದೆಂದರೆ ತಲೆಮೀರಿದ ಕಾರ್ಯವೆಂದು ಅವನಿಗೆ ತೋರಿತು. ಅಂತಲೇ ಅವನು ಗುಟ್ಟಾಗಿ ಮರಾಳ ದ್ವೀಪವನ್ನು ಬಿಟ್ಟು, ಇರುವ ಬಲವನ್ನೆಲ್ಲಾ ಕುಂಡಲಿನೀ ದ್ವೀಪ ದಲ್ಲೇ ಕೇಂದ್ರೀ ಕರಿಸಿಕೊಂಡನು.

ಯಾವುದೊಂದು ಪ್ರತಿಭಟನೆಯೂ ಇಲ್ಲದೆ, ಶಿವದತ್ತನೂ, ಮಂದರದೇವನೂ ಮೊದಲು ಮರಾಳ ದ್ವೀಪವನ್ನು ಆಕ್ರಮಿಸಿಕೊಂಡರು. ಅಲ್ಲಿಯ ಪ್ರಜೆ ಗಳಿಗೆ ತಮ್ಮ ರಾಜನನ್ನು ನೋಡಿ ಉಂಟಾದ ಸಂತೋಷಕ್ಕೆ ಮೇರೆ ಇರಲಿಲ್ಲ. ಆದರೆ ಮಂದರದೇವ ಶಿವದತ್ತರು ಅಲ್ಲಿ ಹೊತ್ತು ಕಳೆಯದೆ ಅಲ್ಲಿಂದ ಸೀದಾ ಕುಂಡಲಿನೀ ದ್ವೀಪಕ್ಕೆ ಹೋದರು. ತೀರದಲ್ಲೆಲ್ಲಿಯೂ ನರವಾಹನನ ಸೈನಿಕರಾರೂ ಕಾಣಲೇ ಇಲ್ಲ. ಶಿವದತ್ತನಿಗೆ ಇದು ಬಹಳ ಆಶ್ಚರ್ಯವನ್ನುಂಟು

ಮಾಡಿತು. ಅವನು ಒಳಪ್ರಾಂತಕ್ಕೆ ಗೂಢಚಾರರನ್ನು ಕಳುಹಿಸಿದನು. ಅವರು ಹೋಗಿ ಸ್ವಲ್ಪ ಹೊತ್ತಿಗೆಲ್ಲಾ ಬಂದು, "ಅಯ್ಯಾ, ನಾವು ದಾಳಿ ಬರುವ ವಿಷಯ ವನ್ನು ತಿಳಿದು, ಈ ಮೊದಲು ನರವಾಹನನಿಂದ ಚಿತ್ರ ಹಿಂಸೆಗೆ ಗುರಿಯಾದ ಬೇಡರು ನೂತನೋತ್ಸಾಹ ದಿಂದ ನರವಾಹನನ ಮೇಲೆ ತಿರುಗಿ ಬಿದ್ದರು. ಆ ಬೇಡರ ಬಂಡಾಯದ ಗುಂಪು ಈಗ ನಗರವನ್ನು ಮುತ್ತಿಕೊಂಡಿದೆ" ಎಂದು ಸಮಾಚಾರ ಹೇಳಿದರು.

ಈ ವಾರ್ತೆ ಮಂದರದೇವನನ್ನು ಬಹಳ ನಿರುತ್ಸಾಹಪಡಿಸಿತು. "ಅರರೇ! ಅವನ ಕೆಲಸವನ್ನು ಈ ಬೇಡರೇ ಮುಗಿಸುವ ಹಾಗಿದೆಯಲ್ಲಾ! ಎಂದಾದರೂ, ನಾನೇ ನನ್ನ ಸ್ವಹಸ್ತದಿಂದ ಆ ಕ್ರೂರ ನರವಾಹನನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದೆ. ಈಗ ನನ್ನ ಪ್ರತಿಜ್ಞೆಯ ಗತಿ ಏನು!" ಎಂದನು ಮಂದರದೇವ.

"ಹಾಗೆ ತಪ್ಪಿದರೂ ಒಳ್ಳೇದಾಯಿತನ್ನಿ! ಆ ಪಾಪಿಯನ್ನು ಕೊಂದು ನಿಮ್ಮ ಖಡ್ಗವನ್ನೇಕೆ ಹೊಲೆ ಮಾಡಿಕೊಳ್ಳಬೇಕು" ಎಂದು ಶಿವದತ್ತನು ನಗುತ್ತ ಹೇಳಿ, ವಜ್ರಮುಷ್ಟಿಯನ್ನು ಕರೆದು ಅವನೊಂದಿಗೆ ಐವತ್ತುಮಂದಿ ಅಶ್ವೀಕರನ್ನು ಕೊಟ್ಟು ಮುಂದಾಗಿ ಕಳುಹಿಸಿದನು. ಒಂದು ವೇಳೆ ನರವಾಹನನು ಇನ್ನೂ ಬದುಕಿದ್ದರೆ, ಅವನನ್ನು ಕೊಲ್ಲಬೇಡವೆಂದು ಬೇಡರಿಗೆ ತಿಳಿಸುವಂತೆ ವಜ್ರಮುಷ್ಟಿಗೆ ಎಚ್ಚರಿಕೆಕೊಟ್ಟನು.

ವಜ್ರಮುಷ್ಟಿ ಅಶ್ವೀಕರೊಂದಿಗೆ ಕುಂಡಲಿನೀ ನಗರವನ್ನು ಸೇರುವಷ್ಟರಲ್ಲಿ, ಮಿಡಿತೆಗಳ ದಂಡಿನಂತೆ ಬೇಡರು ನಗರದ ಮೇಲೆ ಬಿದ್ದಿದ್ದರು. ಅವರ ಕತ್ತಿ, ಈಟಿ, ಬಾಣ, ದೊಣ್ಣೆ, ಬಲೆಗಳು ನರವಾಹನನ ದುಷ್ಟ ಸೈನಿಕ ಗಢಣವನ್ನು ಕೊಂದು ಕೊಂದು ರಾಶಿ ಹಾಕುತ್ತಿದ್ದುವು. ವಜ್ರಮುಷ್ಟಿ ಶಿವದತ್ತನಿಂದ ತಾನು ತಂದ ಆಜ್ಞೆಯನ್ನು ಬೇಡರ ನಾಯಕನಿಗೆ ತಿಳಿಯ ಪಡಿಸಿ, ಕೋಟೆಯನ್ನು ಸಮೀಪಿಸಿದನು. ಆಗ



ಬುರುಜಿನ ಮೇಲ್ಭಾಗದಲ್ಲಿ ಕೈ ಕಾಲುಗಳನ್ನು ಬಂಧಿ ಸಲ್ಪಟ್ಟ ನರವಾಹನನು ಬೇಡಬಂಟರ ನಡುವೆ ಕಾಣಿಸಿದನು.

"ಅವನನ್ನು ಕೊಲ್ಲಬೇಡ್ರೋ! ಶಿವದತ್ತರ ಆಜ್ಞೆ!" ಎಂದು ಗಟ್ಟಿಯಾಗಿ ಕೂಗುತ್ತಾ, ವಜ್ರಮುಷ್ಟಿ ತನ್ನ ಕುದುರೆಯನ್ನು ಸಮೀಪಕ್ಕೆ ಓಡಿಸಿದನು. ಅಷ್ಟರೊಳಗೆ ಕ್ರೂರ ನರವಾಹನನು ಬುರುಜಿನ ಮೇಲಿನಿಂದ ಕೆಳಗಿನ ಅಗಳ್ತೆಯೊಳಗೆ ದೂಡಲ್ಪಟ್ಟನು. ಅದೇ ಸಮಯದಲ್ಲಿ ಆ ಪ್ರಾಂತ ದಲ್ಲಿ ಗುಂಪು ಗೂಡಿದ ಬೇಡರು ಹರ್ಷಧ್ವಾನಗಳನ್ನು ಮಾಡಿದರು. ವಜ್ರಮುಷ್ಟಿ ಅಗಳ್ತೆಯಬಳಿಗೆ ಹೋಗಿ ನೋಡಲು ನರವಾಹನನು ಸತ್ತು ಬಿದ್ದಿದ್ದನು.

ಅನಂತರ ಬಹಳ ಹೊತ್ತಿನ ಮೇಲೆ ಶಿವದತ್ತ, ಮಂದರದೇವ, ಶಮನರಾಜ ಕೂಡಾ ಸೇನೆಯೊಂದಿಗೆ ಅಲ್ಲಿಗೆ ಬಂದರು. ಅವರಿಗೆ ಬೇಡರ ನಾಯಕನು ಘನರೀತಿಯಲ್ಲಿ ಸ್ವಾಗತ ಮಾಡಿದನು. ಆಗಿಂದಾಗಲೇ

ಮಂದರದೇವನು ಮರಾಳದ್ವೀಪಕ್ಕೂ ಕುಂಡಲಿನೀ ದ್ವೀಪಕ್ಕೂ ಮಹಾರಾಜನೆಂದು ಪ್ರಕಟಿಸಲ್ಪಟ್ಟಿತು. ಬೇಡರಿಗೆಲ್ಲಾ ನರವಾಹನನು ಆಕ್ರಮಿಸಿಕೊಂಡ ಅದರ ಭಾಗಗಳನ್ನು ಅವರಿಗೇ ತಿರುಗಿಕೊಟ್ಟು ಸ್ವತಂತ್ರರನ್ನಾಗಿಯೂ ಮಾಡಲಾಯಿತು.

ಒಂದುವಾರ ದಿನಗಳು ಕಳೆದ ಮೇಲೆ ಶುಭದಿನದಲ್ಲಿ ಮಂದರದೇವನಿಗೆ ಸ್ವಯಂಪ್ರಭೆಯೊಂದಿಗೆ ವಿವಾಹವು ಬಹು ವಿಜೃಂಭಣೆಯಿಂದ ನಡೆಯಿತು. ಶಿವದತ್ತನು ಹರಿಶಿಖಿನು ಕಳುಹಿಸಿದ ಸೈನಿಕರಿಗೆಲ್ಲಾ ದೊಡ್ಡ ದೊಡ್ಡ ಬಹುಮಾನಗಳನ್ನು ಕೊಟ್ಟು ಅವರನ್ನು ಮಕರಮಂಡಲಕ್ಕೆ ಕಳುಹಿಸಿದನು.

ತರುವಾಯ ಒಂದು ದಿನ ಶಿವದತ್ತನ ಅಪೇಕ್ಷೆಯಂತೆ ಮಂದರದೇವನು ಮಹಾಸಭೆಯ ಏರ್ಪಾಡು ಮಾಡಿದನು. ಅದಕ್ಕೆ ಮರಾಳ, ಕುಂಡಲಿನೀ ದ್ವೀಪಗಳ ಹಿರಿಯರೆಲ್ಲಾ ಬಂದರು. ಶಿವದತ್ತನು, ತಾನು ಸನ್ಯಾಸವನ್ನು ಸ್ವೀಕರಿಸಿ, ಅರಣ್ಯಕ್ಕೆ ಹೋಗುವೆನೆಂದೂ, ಶೇಷ ಜೀವಿತವನ್ನು ದೈವಧ್ಯಾನದಲ್ಲಿ ಕಳೆಯುವೆನೆಂದೂ ಆ ಸಭೆಯಲ್ಲಿ ಪ್ರಕಟಿಸಿದನು.

ಇದನ್ನು ಕೇಳಿ ಮಂದರದೇವನಿಗೂ ಸಭಿಕರಿಗೂ ಕಳವಳವಾಯಿತು. ಅವರೆಲ್ಲಾ ಶಿವದತ್ತನನ್ನು ಮಂತ್ರಿಯಾಗಿಯೋ ರಾಜಗುರುವಾಗಿಯೋ ಇದ್ದು ತಮ್ಮನ್ನು ನಡೆಸಬೇಕೆಂದು ಕೇಳಿಕೊಂಡರು. ಶಿವದತ್ತನು ಅದಾವುದನ್ನೂ ಅಂಗೀಕರಿಸಲಿಲ್ಲ. ಆವನು ಮಂದರದೇವ ಹಾಗೂ ಸಭಿಕರನ್ನು ನೋಡಿ, ಹೀಗೆ ಹೇಳಿದನು :

"ಪಾಲಕರೂ, ಪಾಲಿತರೂ ಯಾವ ರೀತಿಯ ಧರ್ಮಗಳನ್ನು ಅನುಸರಿಸಿದರೆ ದೇಶಕ್ಕೆ ಕ್ಷೇಮವಾಗುವುದೆಂಬುದನ್ನು ಈವರೆಗೆ ನಡೆದ ಘಟನೆಗಳಿಂದ, ಮರಾಳದವರಿಗೂ, ಕುಂಡಲಿನಿಯವರಿಗೂ ಚೆನ್ನಾಗಿ ಗೊತ್ತಾಗಿರಬೇಕೆಂದು ನಾನು ನಂಬುತ್ತೇನೆ, ಚಿತ್ರಸೇನ, ಸಮರಸೇನರ ಪರಿಪಾಲನೆಯಲ್ಲಿ ಏನಾಯಿತು, ನರವಾಹನನ ಪ್ರವೇಶ ಹೇಗಾಯಿತು ಎಂಬುದನ್ನೆಲ್ಲಾ ನೀವೆಲ್ಲರೂ ಮರೆಯದಿದ್ದರೆ ಆಯಿತು. ಆದುದರಿಂದ ಯಾವುದು ಧರ್ಮ, ಯಾವುದು ಅಧರ್ಮ ಎಂಬುದು ನಿಮಗೆಲ್ಲಾ ಅಂಗೈ ಕನ್ನಡಿಯಂತೆ ನಿಮ್ಮ ಮನಸ್ಸಿನ ಮುಂದಿದೆ. ಆದಕ್ಕೆ ಅನುಗುಣವಾಗಿ ನೀವೆಲ್ಲಾ ಪ್ರವರ್ತಿಸಿಕೊಂಡು ಸುಖವಾಗಿರಬೇಕು."

ಶಿವದತ್ತನ ಮಾತುಗಳನ್ನು ಕೇಳಿ ಎಲ್ಲರೂ ಹರ್ಷಧ್ವನಿ ಮಾಡಿದರು. ಶಿವದತ್ತನು ಎಲ್ಲರಿಗೂ ನಮಸ್ಕಾರ ಮಾಡಿ, ಸಭೆಯಿಂದ ಹೊರಟನು. ರಾಜನೂ ಪ್ರಜೆಗಳೂ ಅವನನ್ನು ಅನುಸರಿಸಿ ಪಟ್ಟಣಕ್ಕೆ ನಾಲ್ಕೈದು ಕ್ರೋಶ ದೂರದಲ್ಲಿರುವ ಅರಣ್ಯದವರೆಗೂ ಹೋದರು. ಶಿವದತ್ತನು ಅಲ್ಲಿಂದ ಎಲ್ಲರನ್ನೂ ಹಿಂದಿರುಗಲು ಹೇಳಿ ನಮಸ್ಕಾರಮಾಡಿ ಅರಣ್ಯದೊಳಗೆ ಹೊರಟುಹೋದನು. (ಮುಗಿಯಿತು)





# ಬಡ ಸೈನಿಕ

ಕೆಳಗಿನ ನೀರು ಮೇಘದವರೆಗಷ್ಟೇ ಹೋಗುವಂತೆ, ಮರದ ಕೊಂಬೆಯವರೆಗಷ್ಟೇ ಓಡಿ ನೇತಾಡುವ ಶವಾವಾಹಿತ ಬೇತಾಳವನ್ನು, ಇಂದ್ರನು ಮೇಘದ ನೀರನ್ನು ಕೆಳಗೆ ಸುರಿಸುವಂತೆ ರಾಜಾ ತ್ರಿವಿಕ್ರಮನು ಕೊಂಬೆಯಿಂದಿಳಿಸಿ ತನ್ನ ಹೆಗಲಿಗೇರಿಸಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ಸಾಗುತ್ತಿರುವಾಗ, ಶವದ ಬಾಯಿಯ ಮೂಲಕ ಬೇತಾಳವು ಹೇಳ ತೊಡಗಿತು : " ರಾಜಾ, ಈ ಅರ್ಧ ರಾತ್ರಿಯ ಹೊತ್ತಿನಲ್ಲಿ ಬಹಳ ಸಹನಯಿಂದ ನೀನಿಷ್ಟು ಶ್ರಮ ಪಡುವುದಕ್ಕೆ ಯಾವುದೋ ಬಲವಾದ ಕಾರಣವೇ ಇದ್ದೀತು. ಕೀರ್ತಿಗಾಗಿಯೋ, ಧನಕ್ಕಾಗಿಯೋ ಅಥವಾ ಯಾವ ಕೋರಿಕೆಯೂ ಇಲ್ಲದೆ ಯಾರಿಗೋ ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಕ್ಕಾಗಿಯೋ ಹೀಗೆ ಕಷ್ಟ ಪಡುತ್ತಿರಬಹುದು. ಈ ಕಡೆಯ ಕಾರಣದಿಂದಾದರೆ ಮಾತ್ರ ಕೊನೆಗೆ ನೀನು ಪಶ್ಚಾತ್ತಾಪ ಪಡಬೇಕಾದೀತು. ಯಾವುದೂ ಶಾಶ್ವತವಲ್ಲದ ಈ ಲೋಕದ ಮನುಷ್ಯನು ಮಿತಿಮೀರಿದ ದುರಾಶೆಗೆ ಒಳಗಾದರೆ ಏನೂ ಸಿಗದೆ ಹೋಗಬಹುದು. ಕೊಟ್ಟ ಮಾತನ್ನು ನಡೆಸಲು ಹೋಗಿ ಯಾವ ಲಾಭವನ್ನೂ ಪಡೆಯಲಾಗದವನ

ಬೇತಾಳ ಕಥೆಗಳು



ಕಥೆಯೊಂದನ್ನು ಹೇಳುತ್ತೇನೆ. ನಡೆಯುವ ಕಷ್ಟ ತಿಳಿಯದಂತೆ ಕಥೆ ಕೇಳುತ್ತಾ ಹೋಗು" ಎಂದು ಕಥೆಯನ್ನು ಹೇಳಲಾರಂಭಿಸಿತು :

ಒಂದಾನೊಂದು ಅರಣ್ಯ ಪ್ರಾಂತದ ಸಣ್ಣ ಗ್ರಾಮದಲ್ಲಿ ಒಬ್ಬ ಬಡವನು ವಾಸ ಮಾಡಿಕೊಂಡಿದ್ದನು. ಅವನಿಗೆ ಹೆಂಡತಿಯೂ, ಮದುವೆಯ ಪ್ರಾಯಕ್ಕೆ ಬರುತ್ತಿರುವ ಮೂವರು ಹೆಣ್ಣು ಮಕ್ಕಳೂ ಇದ್ದರು. ಹೆಣ್ಣು ಮಕ್ಕಳ ವಿಷಯದಲ್ಲಿ ಅವನಿಗೆ ಚಿಂತೆ ಪ್ರಾರಂಭವಾಯಿತು. ಅವರಿಗೆ ಬೇಗದಲ್ಲಿ ಮದುವೆ ಮಾಡಿದರಷ್ಟೇ ಅವನಿಗೆ ನೆಮ್ಮದಿ. ಮದುವೆ ಮಾಡಬೇಕಾದರೆ ಮುಖ್ಯವಾಗಿ ಹಣವಿರಬೇಕು; ಹೆಣ್ಣು ಕೇಳಲು ಬರುವವರೆಲ್ಲ ಹುಡುಗಿಯೊಂದಿಗೆ ಏನು ಕೊಡುವಿರೆಂತಲೇ ಕೇಳುತ್ತಾರೆ. ಆ ಬಡವನಿಗೆ ಹಣಸಿಗುವ ಮಾರ್ಗವೇನೂ ಗೊತ್ತಾಗದೆ ಸದಾ ಚಿಂತಿಸಿಕೊಂಡೇ ಇದ್ದನು. ಒಂದು ದಿನ ಅವನ ಹೆಂಡತಿಗೆ ಒಂದು ಆಲೋಚನೆ ಬಂತು. ಅವಳು ಗಂಡನ ಬಳಿಗೆ ಬಂದು, "ಹೀಗೆ ಚಿಂತಿಸಿಕೊಂಡೇ ಇದ್ದರೆ ಏನು ಲಾಭವಾದೀತು ? ಇನ್ನಷ್ಟು ಆರೋಗ್ಯ ಕೆಟ್ಟು ಹೋಗುತ್ತದೆ. ನೀವು ಮೊದಲು ಮಹಾರಾಜರ ಹತ್ತಿರ ಸೈನ್ಯದಲ್ಲಿ ಕೆಲಸ ಮಾಡಿದವರು. ದೊಡ್ಡ ಗಾಯವಾದುದರಿಂದ ಕೆಲಸ ಬಿಟ್ಟು ಮನೆ ಹಿಡಿದು ಕೂರಬೇಕಾಯಿತು. ನೀವು ಈಗ ಮಹಾರಾಜರ ಬಳಿಗೆ ಹೋಗಿ, ನಮ್ಮ ಸಂಗತಿ ಹೇಳಿ, ಏನಾದರೂ ಸಹಾಯವನ್ನು ಕೇಳಿರಿ. ಪ್ರಭುಗಳ ಮನಸ್ಸು ಒಳ್ಳೆಯದೆಂದು ಎಲ್ಲರೂ ಹೇಳುತ್ತಾರೆ. ಅವರು ತಪ್ಪದೆ ಅಷ್ಟೋ ಇಷ್ಟೋ ಹಣ ಸಹಾಯ ಮಾಡದಿರಲಿಕ್ಕಿಲ್ಲ" ಎಂದು ಆಲೋಚನೆ ಹೇಳಿದಳು.

ಹೆಂಡತಿಯ ಸಲಹೆ ಬಡಸೈನಿಕನಿಗೆ ಸರಿಯೆನಿಸಿತು. ಮಹಾರಾಜನು ತುಂಬಾ ಧರ್ಮಬುದ್ಧಿ ಉಳ್ಳವನೆಂದು ಅವನಿಗೆ ಗೊತ್ತು. ಅವನು ಕೂಡಲೇ ಅರಣ್ಯದಾಚೆಗಿರುವ ರಾಜಧಾನೀ ನಗರವಾದ ಪ್ರತಿಷ್ಠಾನಪುರಕ್ಕೆ ಹೊರಟನು.

ಒಂದು ಕಾಲದಲ್ಲಿ ರಾಜನಿಗೆ ಸೇವೆ ಮಾಡಿದ ಸೈನಿಕನಾದುದರಿಂದ ಸುಲಭವಾಗಿಯೇ ಅವನಿಗೆ ರಾಜನ ದರ್ಶನವಾಯಿತು. ಬಡಸೈನಿಕನು ತನಗೆ ಬಂದ ಕಷ್ಟವನ್ನು ಕುರಿತು ರಾಜನೊಂದಿಗೆ ಹೇಳಿ, ಹೆಣ್ಣು ಮಕ್ಕಳ ಮದುವೆಯ ಖರ್ಚಿಗೆ ಸ್ವಲ್ಪ ಧನ ಸಹಾಯ ಮಾಡಬೇಕೆಂದು ಕೇಳಿಕೊಂಡನು. ತನ್ನ ಮಾತು ಕೇಳುವಾಗ ರಾಜನ ಮುಖದಲ್ಲಿ ಆಲೋಚನೆಯ ಭಾವ ಹರಡುವುದನ್ನು ನೋಡಿ ಅವನಿಗೆ ಭಯವಾಯಿತು.

ರಾಜನು ಅವನ ಮೇಲೆ ಬಹಳ ಸಹಾನುಭೂತಿ ತೋರಿಸುತ್ತ, "ನೋಡಪ್ಪಾ, ಸಾಧಾರಣ ಪರಿಸ್ಥಿತಿಯಲ್ಲಿ ಆಗಿರುತ್ತಿದ್ದರೆ ನಿನಗೆ ತಪ್ಪದೆ ಸಹಾಯ ಕೊಡುತ್ತಿದ್ದೆ. ಆದರೆ ಈ ನಡುವೆ ಬಂದ ಸುಳಿಗಾಳಿ, ನೆರೆ ಹಾವಳಿಗಳಿಂದ ನಮ್ಮ ರಾಜ್ಯದ ಉತ್ತರ ಪ್ರಾಂತದಲ್ಲಿ ಐವತ್ತೈದು ಊರುಗಳಿಗೆ ಭಾರೀ ನಾಶವಾಗಿದೆ. ಅಲ್ಲಿಯ ಪ್ರಜೆಗಳಿಗೆ ಹೊಸ ನಿವಾಸ ಸ್ಥಾನಗಳನ್ನು

ಏರ್ಪಡಿಸಿ ಮುಗಿಯುವ ವರೆಗೆ ಯಾರಿಗೂ ಯಾವ ಧನ ಸಹಾಯವನ್ನೂ ಮಾಡಕೂಡದೆಂದು ಖಜಾನೆಯ ಅಧಿಕಾರಿಗೆ ಖಂಡಿತ ಆಜ್ಞೆ ಮಾಡಿದ್ದೇನೆ. ನಿಜ ಸಂಗತಿ ಹೇಳಬೇಕಾದರೆ ಪ್ರಸ್ತುತ ಕೋಶಾಗಾರದಲ್ಲಿ ನಷ್ಟ ಪಟ್ಟ ಆ ಊರಿನವರಿಗೆ ತಕ್ಕ ಪರಿಹಾರ ಮಾಡಲಿಕ್ಕೇ ಧನವಿಲ್ಲ. ನೆರೆ ದೇಶಗಳ ಸಹಾಯಕ್ಕೆ ಕೈ ನೀಡಬೇಕಾಗಿ ಬಂದಿದೆ. ಅವರಿಂದ ಸಿಗುವುದೋ ಇಲ್ಲವೋ ಎಂಬ ಅನುಮಾನದಲ್ಲಿದ್ದೇನಪ್ಪಾ. ನಿನ್ನ ಶಕ್ತಿಗೆ ತಕ್ಕ ಅಳಿಯಂದಿರೇ ನಿನಗೆ ಸಿಕ್ಕುತ್ತಾರೆಂದು ನಂಬಿ ತಾಳ್ಮೆಯಿಂದಿರು" ಎಂದು ರಾಜನು ತನ್ನ ಅಸಹಾಯಕತೆಯನ್ನು ಹೇಳಿಕೊಂಡನು.

"ಕ್ಷಮಿಸಿ ಮಹಾಪ್ರಭೂ, ಪರಿಸ್ಥಿತಿ ಹೀಗಿರುವುದೆಂದು ನನಗೆ ತಿಳಿದಿರಲಿಲ್ಲ. ನನ್ನದು ಅಲ್ಪ ಪ್ರಶ್ನೆ. ಅಪ್ಪಣೆ ಸ್ವಾಮಿ" ಎಂದು ಹೇಳಿ ಬಡ ಸೈನಿಕನು ಅಲ್ಲಿಂದ ಹಿಂದಿರುಗಿದನು.

ಅವನು ತನ್ನ ಊರಿಗೆ ಪ್ರಯಾಣ ಮಾಡುತ್ತ, ಅರಣ್ಯ ಮಾರ್ಗದಲ್ಲಿ ನಡೆಯುವಾಗ ಕತ್ತಲೆಯಲ್ಲಿ ದಾರಿ ತಪ್ಪಿದನು. ಆಗ ಗುಡುಗು ಮಿಂಚುಗಳೊಂದಿಗೆ ಮಳೆ ಬೀಳ ಪ್ರಾರಂಭವಾಯಿತು.

ಬಡ ಸೈನಿಕನು ಈ ರಾತ್ರಿಯಲ್ಲಿ ಎಲ್ಲಿ ತಲೆ ಮರೆಸಿಕೊಳ್ಳುವುದಪ್ಪಾ ಎಂದು ಅತ್ತಿತ್ತ ನೋಡುತ್ತಿರಲು, ಚಿಕ್ಕದೊಂದು ಗುಡ್ಡದ ಬದಿಯಲ್ಲಿ ಶಿಥಿಲಾವಸ್ಥೆಯಲ್ಲಿದ್ದ ಮನೆಯೊಂದು ಕಾಣಿಸಿತು. ಓಡುತ್ತಾ ಅಲ್ಲಿಗೆ ಹೋದನು.

ಅವನು ಆ ಮನೆಯೊಳಗೆ ಪ್ರವೇಶಿಸಲು ನೋಡುವಾಗ, ಮನೆಯೊಳಗಿನಿಂದ ಒಂದು ನರಿಯೂ, ಆಮೇಲೆ ಒಂದು ಕಾಡುಬೆಕ್ಕೂ ಹೊರಗೆ ಓಡಿ ಹೋದುವು. ಕೆಲವು ಗಬ್ಬಿಲಗಳು ಕೀಚು ಕೀಚೆನ್ನುತ್ತ ಅವನ ತಲೆಯ ಮೇಲಿಂದಾಗಿ ಹೊರಗೆ ಹಾರಿದುವು. ಧೈರ್ಯದಿಂದ ಅವನು ಮನೆಯೊಳಗೆ ಕಾಲಿಟ್ಟ ಕೂಡಲೇ ಶಿಥಿಲವಾಗಿದ್ದ ಗೋಡೆಯ ಕಡೆಯಿಂದ



ಹಾವು ಭುಸುಗುಟ್ಟಿದ ಶಬ್ದ ಕೇಳಿಸಿತು. ಅದರಿಂದ ಹೆದರಿ ಹಾಗೆಯೇ ನಿಂತನು.

ಹೇಗೆ ಮುಂದೆ ಹೋಗುವುದೆಂದು ಆ ಸೈನಿಕನು ಆಲೋಚಿಸುತ್ತ ನಿಂತಿರಲು, ಕಣ್ಣು ಜಗ್ಗೆನಿಸುವಂತೆ ಮಿಂಚಿತು. ಆ ಮಿಂಚಿನ ಕಾಂತಿಯಲ್ಲಿ ತನ್ನ ಕಡೆಗೆ ಬರುತ್ತಿದ್ದ ಒಂದು ಪಿಶಾಚಿಯನ್ನು ನೋಡಿದನು. ಕೂಡಲೇ ಸೈನಿಕನು ಅಲ್ಲಿಂದ ಓಡಿಹೋಗಲು ತಿರುಗಿದನು. ಅಷ್ಟರೊಳಗೆ ಪಿಶಾಚಿ ಬಾಗಿಲಿನಲ್ಲಿ ಅವನಿಗೆ ಅಡ್ಡಗಟ್ಟಿ ನಿಂತುಬಿಟ್ಟಿತು. ಇನ್ನು ತನಗೆ ಸಾವು ತಪ್ಪದೆಂದು ಸೈನಿಕನು ಮೊಂಡು ಧೈರ್ಯದಿಂದ ಇಷ್ಟ ದೈವವನ್ನು ನೆನೆದುಕೊಂಡು ಪಿಶಾಚಿಯ ಕಡೆಗೆ ನೋಡುತ್ತಾ ನಿಂತನು.

"ಹೆದರಬೇಡ, ನಾನು ಪಿಶಾಚಿಯಾದರೂ ನಿನಗೆ ಮಾತ್ರ ಏನೂ ಹಾನಿ ಮಾಡುವುದಿಲ್ಲ. ಏಕೆಂದರೆ ನಿನ್ನಿಂದ ಒಂದು ಕೆಲಸವಾದೀತೇ ಎಂಬ ಆಶೆ" ಎಂದಿತು ಪಿಶಾಚಿ.



ಅದರ ಮಾತಿನಿಂದ ಬಡ ಸೈನಿಕನಿಗೆ ಧೈರ್ಯ ಬಂದು, ಆಶ್ಚರ್ಯವೂ ಆಯಿತು. ಪಿಶಾಚಿಗೆ ತನ್ನಿಂದ ಸಹಾಯ ವೆಂದರೇನಪ್ಪ! " ಹಾಗೇನು ? ನನ್ನಿಂದ ಕೂಡ ನಿನಗೇನೂ ಹಾನಿಯಾಗದು. ನನ್ನನ್ನು ನನ್ನ ಪಾಡಿಗೆ ಬಿಟ್ಟರೆ ಸಾಕು. ನಿನಗೆ ಸಹಾಯಮಾಡುವುದೂ ಬಿಡುವುದೂ ನನ್ನ ಇಷ್ಟ ತಾನೇ ? ಸಾಧ್ಯವಿಲ್ಲ ವೆಂದರೆ ನೀನೇನು ಮಾಡವಿಯೋ ಮೊದಲು ಹೇಳು" ಎಂದನು.

ಪಿಶಾಚಿ ನಕ್ಕು " ನಿನ್ನಿಂದ ನನಗೆ ಹಾನಿಯಾಗುವು ದೇನೂ ಇಲ್ಲ. ಅದು ನಿನಗೆ ಸಾಧ್ಯವೂ ಇಲ್ಲ. ಪ್ರಯತ್ನಿಸಿದರೆ ನಾನು ನಿನಗೆ ಮೇಲನ್ನೇ ಮಾಡು ತ್ತೇನೆ. ನಿನ್ನನ್ನು ನೋಡಿದ ಕೂಡಲೇ ನಿನಗೇನಾದರೂ ಒಳ್ಳೇದು ಮಾಡಬೇಕೆಂದು ತೋರಿತು. ಮನುಷ್ಯರಿಗೆ ಯಾವಾಗಲೂ ಇರುವಂಥಾದ್ದು ಧನದ ಕೊರತೆಯೇ. ನಿನಗೆ ಧನವೇನಾದರೂ ಬೇಕೇ ?" ಎಂದು ಕೇಳಿತು ಆ ವಿಚಿತ್ರ ಪಿಶಾಚಿ.

"ಧನವೋ? ಬೇಕು ಬೇಕು. ಏನು ಕೆಲಸವಾಗಬೇಕು ನಿನಗೆ ನನ್ನಿಂದ?" ಎಂದನು ಸೈನಿಕ ಆತುರದಿಂದ.

"ನಿನಗೆ ಎಷ್ಟು ಧನ ಬೇಕು? ಮೊದಲು ಹೇಳು" ಎಂದು ಕೇಳಿತು ಪಿಶಾಚಿ.

"ಸುಮಾರು ಮೂವತ್ತು ಸಾವಿರ ರೂಪಾಯಿ ಗಳಾಗುವಷ್ಟು ಕೊಟ್ಟರೆ ನನ್ನ ಹೆಣ್ಣುಮಕ್ಕಳ ಮದುವೆ ಮಾಡಬಹುದು. ಅದಕ್ಕೇ ಧನವಿಲ್ಲದೆ ಚಿಂತಿಸು ತ್ತಿದ್ದೇನೆ " ಎಂದನು ಸೈನಿಕ.

"ನೀನು ಅನುಭವವಿಲ್ಲದ ಹುಡುಗನ ಹಾಗೇ ಕಾಣುವಿ. ಈ ಬದಿಯಲ್ಲಿರುವ ಗುಹೆಯೊಳಗಿರುವ ಚಿನ್ನದ ನಾಣ್ಯಗಳನ್ನೆಲ್ಲಾ ನಿನಗೇ ಕೊಡುತ್ತೇನೆ. ಅದು ಬಹುಶಃ ಮೂವತ್ತು ಲಕ್ಷ ಚಿನ್ನದ ನಾಣ್ಯಗಳು. ಅದಕ್ಕೆ ಪ್ರತಿಫಲವಾಗಿ ನೀನೊಂದು ಕೆಲಸ ಮಾಡ ಬೇಕು. ಪವಿತ್ರವಾದ ಗಯಾಕ್ಷೇತ್ರಕ್ಕೆ ಹೋಗಿ ಅಲ್ಲಿ ಶಾಸ್ತ್ರೋಕ್ತವಾಗಿ ನನ್ನ ಅಂತ್ಯಕ್ರಿಯೆ ನಡೆಸಬೇಕು. ದಯವಿಟ್ಟು ನೀನು ಅಷ್ಟು ಮಾಡಿಬಿಟ್ಟರೆ ಈ ನಾಣ್ಯ ಗಳೆಲ್ಲ ನಿನ್ನದಾಗುತ್ತವೆ " ಎಂದಿತು ಪಿಶಾಚಿ.

ಅದರ ವಿಚಿತ್ರ ಕೋರಿಕೆಯನ್ನು ಕೇಳಿ ಆಶ್ಚರ್ಯ ಪಡುವ ಸೈನಿಕನನ್ನು ನೋಡಿ ಪಿಶಾಚಿ ಆ ಧನ ಸಂಗ್ರಹದ ವಿವರಗಳನ್ನು ಕುರಿತು ಅವನೊಂದಿಗೆ ಹೇಳಲಾರಂಭಿಸಿತು :

ಈಗ್ಗೆ ಎರಡು ತಲೆಮಾರಿನ ಹಿಂದೆ ಆ ಪ್ರಾಂತದಲ್ಲಿ ಮಹಾ ಕ್ರೂರನಾದ ದಾರಿ ದೋಚುವ ಕೊಳ್ಳೆಗಾರ ನೊಬ್ಬನಿದ್ದ. ಅವನು ಕಳ್ಳತನದಲ್ಲಿ ಸುಶಿಕ್ಷಿತರಾದ ಕೆಲವು ಮಂದಿ ಅನುಚರರೊಂದಿಗೆ, ಅರಣ್ಯದ ದಾರಿ ಗಳಲ್ಲಿ ಹೊಂಚು ಹಾಕುತ್ತ ವರ್ತಕರನ್ನೂ, ದೂರ ಪ್ರಾಂತದಲ್ಲಿರುವ ಧನಿಕ ಗ್ರಾಮಸ್ಥರನ್ನೂ ಕೊಳ್ಳೆ ಹೊಡೆಯುತ್ತಿದ್ದನು. ನಗರಗಳಲ್ಲಿರುವ ಶ್ರೀಮಂತರೂ ಅವನ ಹಾವಳಿಗೆ ಗುರಿಯಾಗಿದ್ದರು. ಈ ಬಗೆಯ ಹಾಳು ದಾರಿಯಲ್ಲಿ ಸಂಪಾದಿಸಿದ ಧನದಲ್ಲಿ ಪ್ರತಿಯೊಬ್ಬರಿಗೂ ಸಮಾನ ಭಾಗವಿರುವುದೆಂದು

ಹೇಳಿ, ಆ ಧನವನ್ನು ತನ್ನ ಅನುಚರರ ಸಹಾಯದಿಂದ ಇಲ್ಲಿಯ ಗುಹೆಯಲ್ಲಿ ಸೇರಿಸಿಟ್ಟನು.

ಆದರೆ ಒಂದು ದಿನ ರಾಜನ ಸೈನಿಕರು ಅರಣ್ಯದಲ್ಲಿ ಆ ದಾರಿ ಹೊಡಕರನ್ನೆಲ್ಲಾ ಸುತ್ತಿಮುತ್ತಿ ಹಿಡಿದರು. ಆಗ ನಡೆದ ಹೊಡೆದಾಟದಲ್ಲಿ ಎಲ್ಲ ಕಳ್ಳರೂ ಸತ್ತು, ಅವರ ನಾಯಕನು ಮಾತ್ರ ಪ್ರಾಣದೊಂದಿಗೆ ತಪ್ಪಿಸಿಕೊಂಡನು.

ಹಾಗೆ ತಪ್ಪಿಸಿಕೊಂಡ ಆ ಚೋರ ನಾಯಕನು ತಾನು ಅಡಗಿಸಿಟ್ಟ ಧನರಾಶಿಯ ಗುಹೆಯ ಹತ್ತಿರವೇ ಕಾವಲು ಕಾಯುತ್ತ ಕಾಲ ಕಳೆದನು. ಆ ರಹಸ್ಯ ಪ್ರದೇಶವನ್ನು ಬಿಟ್ಟು ಬೇರೆಲ್ಲಿಗಾದರೂ ಹೋದರೆ ರಾಜನ ಸೈನಿಕರು ಧನವನ್ನೆಲ್ಲ ಕಂಡುಹಿಡಿದು ಒಯ್ದು ಬಿಡುವರೇನೋ ಎಂದು ಅವನಿಗೆ ಭಯ. ಒಂದು ದಿನ ಕಾಡಿನಲ್ಲಿ ಹೆಬ್ಬುಲಿಯೊಂದು ಅವನನ್ನು ಕೊಂದು ತಿಂದು ಬಿಟ್ಟಿತು. ಸತ್ತರೂ ಈ ಧನದ ಧ್ಯಾನದಿಂದ ಅವನು ಪಿಶಾಚಿಯಾಗಿ ಆ ಧನವನ್ನು ಕಾವಲು ಕಾದುಕೊಂಡೇ ಇದ್ದನು. ಕಾದು ಕಾದು ದೊಡ್ಡ ಬೇಸರ ಬಂತು. ಪಿಶಾಚ ಜನ್ಮ ಬೇಡವೆನಿಸಿತು. ಹಾಗೆ ಕೆಲವು ವರ್ಷಗಳು ಕಳೆದ ಮೇಲೆ, ಒಂದು ದಿನ ಅರಣ್ಯ ಮಾರ್ಗದಲ್ಲಿ ಹೋಗುತ್ತಿದ್ದ ಯಾತ್ರಿಕನೊಬ್ಬನನ್ನು ಅದು ನೋಡಿತು. ಅವನನ್ನು ಕರೆದು ತನ್ನ ಸಮಾಚಾರವನ್ನೆಲ್ಲಾ ಅವನೊಂದಿಗೆ ಹೇಳಿ, ತನಗೆ ನಿಕೃಷ್ಟವಾದ ಈ ಪಿಶಾಚಿ ಜನ್ಮದಿಂದ ಬಿಡುಗಡೆಯಾಗಲಿಕ್ಕೆ ಗಯೆಯಲ್ಲಿ ತನ್ನ ಅಂತ್ಯಕ್ರಿಯೆ ಮಾಡುವಂತೆ ಅವನನ್ನು ಕೇಳಿಕೊಂಡಿತು. ಅದಕ್ಕೆ ಪ್ರತಿಫಲವಾಗಿ ಗುಹೆಯಲ್ಲಿರುವ ಧನವಷ್ಟನ್ನೂ ತೆಗೆದುಕೊಳ್ಳುವಂತೆಯೂ ಹೇಳಿತು. ಧನದ ಆಶೆಯಿಂದ ಯಾತ್ರಿಕನು ಒಪ್ಪಿದನು.

ಆದರಂತೆ ಯಾತ್ರಿಕನು ಗಯೆಯಲ್ಲಿ ಮಾಡಬೇಕಾದುದನ್ನು ಮಾಡಿ, ಹಿಂದಿರುಗಿ ಬಂದಮೇಲೆ, ಚೋರ ಪಿಶಾಚಿ ಗುಹೆಯ ಧನವನ್ನು ಅವನ ವಶಕ್ಕೆ ಕೊಟ್ಟು ಪಿಶಾಚ ಜನ್ಮದಿಂದ ಮುಕ್ತವಾಗಿ ಹೋಯಿತು. ಯಾತ್ರಿಕನು ಧನದ ವ್ಯಾಮೋಹಕ್ಕೆ ಸಿಕ್ಕಿ ಗುಹೆಯ ಹತ್ತಿರವೇ ಒಂದು ಮನೆ ಕಟ್ಟಿಕೊಂಡು





ಧನವನ್ನು ಕಾವಲು ಕಾಯತೊಡಗಿದನು. ಸ್ವಲ್ಪ ಕಾಲದಲ್ಲಿ ಅವನೂ ಸತ್ತು ಪಿಶಾಚ ರೂಪ ತಾಳಿ ಇಲ್ಲೇ ಕಾದುಕೊಂಡಿದ್ದಾನೆ. ಆ ಯಾತ್ರಿಕ ಪಿಶಾಚನೇ ತಾನೆಂದು ಬಡ ಸೈನಿಕನೊಂದಿಗೆ ಈ ಸಮಾಚಾರವನ್ನೆಲ್ಲಾ ಹೇಳಿ ಗಯೆಗೆ ಹೋಗಿ ತನಗೆ ವಿಮುಕ್ತಿ ಕೊಡಿಸುವಂತೆ ಕೇಳಿಕೊಂಡಿತು.

"ಗಯಾ ಕ್ಷೇತ್ರದಲ್ಲಿ ಆ ಕರ್ಮವನ್ನೆಲ್ಲಾ ಮಾಡಿ ಬರುತ್ತೇನೆ. ಯಾವುದಕ್ಕೂ ಒಂದುಸಾರಿ ಆ ಧನವಿರುವ ಸ್ಥಳವನ್ನು ನನಗೆ ತೋರಿಸು" ಎಂದನು ಸೈನಿಕ ಉತ್ಸಾಹದಿಂದ.

"ನನ್ನ ಮಾತನ್ನು ನಂಬು. ಮೊದಲು ಗಯೆಗೆ ಹೋಗಿ ಕೆಲಸ ಮುಗಿಸಿ ಬಾ. ಆಮೇಲೆ ಆ ಗುಹೆಯ ಧನವನ್ನು ತೋರಿಸುತ್ತೇನೆ" ಎಂದಿತು ಯಾತ್ರಿಕ ಪಿಶಾಚಿ.

ಬಡ ಸೈನಿಕನು ಅದಕ್ಕೆ ಒಪ್ಪಿಕೊಂಡು ಆ ಪಿಶಾಚಿಯ ಹೆಸರು ದೆಸೆಗಳನ್ನು ಕೇಳಿಕೊಂಡು, ಸೀದಾ ಗಯಾ ಕ್ಷೇತ್ರಕ್ಕೆ ಹೋದನು. ಹೋಗಲು ಸುಲಭವಾಗುವ ಸಮೀಪದ ಮಾರ್ಗವನ್ನು ಆ ಪಿಶಾಚಿಯೇ ಗುರುತುಗಳನ್ನು ಹೇಳಿ ತೋರಿಸಿತು. ಸೈನಿಕನು ಗಯೆಯಲ್ಲಿ ಶಾಸ್ತ್ರವಿಧಿಯ ಪ್ರಕಾರ ಶ್ರದ್ಧೆಯಿಂದ ಆ ಪಿಶಾಚಿಗೆ ಉತ್ತರ ಕ್ರಿಯೆಗಳನ್ನು ಮಾಡಿ, ಹಿಂದಿರುಗಿ ಆ ಶಿಥಿಲ ಗೃಹಕ್ಕೆ ಬಂದನು.

ಯಾತ್ರಿಕಪಿಶಾಚಿ ಸಂತೋಷಪಟ್ಟು "ನಿನಗಾಗಿಯೇ ಕಾದಿದ್ದೇನೆ. ನಿನ್ನ ಸಹಾಯದಿಂದ ನನ್ನ ಹೀನ ಜನ್ಮ ಹೋಗುವಂತಾಯಿತು. ನಿನಗೆ ಧನವಿರುವ ಗುಹೆಯನ್ನು ತೋರಿಸಿ ಈ ಪಿಶಾಚ ಜನ್ಮದಿಂದ ಮುಕ್ತನಾಗುತ್ತೇನೆ. ನಿನಗೆ ಈ ಧನದಿಂದ ಸರ್ವಾಭೀಷ್ಟಗಳೂ ನೆರವೇರಲಿ" ಎಂದಿತು.

ಬಡ ಸೈನಿಕನು ಪಿಶಾಚಿಯ ಹಿಂದೆ ಹೋದನು. ಶಿಥಿಲ ಗೃಹದ ಹಿಂದೆ ಧನವು ಅಡಗಿಸಲ್ಪಟ್ಟ ಭೂಗುಹೆಯಿದ್ದಿತು. ಅದರ ಬಾಯಿಯ ಮೇಲೆ ದೊಡ್ಡದೊಂದು ಬಂಡೆಗಲ್ಲೂ, ಅದನ್ನು ಮುತ್ತಿಕೊಂಡು ಕಾಡು ಗಿಡದ ಬಳ್ಳಿಗಳೂ ಇದ್ದುವು.

"ಇದೇ ಧನವಿರುವ ಗುಹೆಯ ಬಂಡೆ. ಅದನ್ನು ತೊಲಗಿಸಿ ಆ ಧನವನ್ನು ತೋರಿಸುತ್ತೇನೆ" ಎಂದಿತು ಯಾತ್ರಿಕ ಪಿಶಾಚಿ.

ಕೂಡಲೇ ಸೈನಿಕನು ಪಿಶಾಚಿಯನ್ನು ತಡೆದು, "ತೋರಿಸುವುದೇನೂ ಬೇಡ. ಆಮೇಲೆ ನೋಡಿಕೊಳ್ಳುತ್ತೇನೆ. ನಿನಗೆ ಕೃತಜ್ಞತೆ" ಎಂದು ಹೇಳಿ ಆ ಕೂಡಲೇ ರಾಜಧಾನಿಯಾದ ಪ್ರತಿಷ್ಠಾನಪುರಕ್ಕೆ ಹೋದನು.

ಅವನು ರಾಜನ ಬಳಿಗೆ ಹೋಗಿ "ಮಹಾಪ್ರಭೂ, ನೆರೆಹಾವಳಿಯಿಂದ ಹಾಳಾದ ಊರುಗಳ ಪುನರುದ್ಧಾರಕ್ಕೆ ತಮಗೆ ಎಷ್ಟು ಧನ ಬೇಕಾಗಬಹುದು?" ಎಂದು ಪ್ರಶ್ನಿಸಿದನು.

ಅವನ ಆ ಪ್ರಶ್ನೆ ಕೇಳಿ ರಾಜನು ತಬ್ಬಿಬ್ಬಾದವನಂತೆ ಅವನನ್ನು ನೋಡಿದನು. ಹಿಂದೊಮ್ಮೆ ತನ್ನ

ಸಹಾಯ ಕೇಳಲು ಬಂದ ಸೈನಿಕನು ನಿರಾಶೆಯಿಂದ ಹೀಗೆ ಬಂದು ಹುಚ್ಚು ಪ್ರಶ್ನೆ ಕೇಳುವನೇನೋ ? ಬುದ್ಧಿಗಿದ್ದಿ ಕೆಟ್ಟಿತೇನೋ ಎಂದು ರಾಜನಿಗೆ ಅನುಮಾನವಾಯಿತು. ಆದರೂ ರಾಜನು ಶಾಂತತೆಯಿಂದಲೇ, "ಕಡೇ ಪಕ್ಷ ಇಪ್ಪತ್ತು ಲಕ್ಷ ಚಿನ್ನದ ನಾಣ್ಯಗಳಷ್ಟು ಬೇಕಾಗುತ್ತದೆ. ಎಲ್ಲಿದೆ ?" ಎಂದನು.

"ಇಪ್ಪತ್ತಲ್ಲ, ತಾವು ನನ್ನೊಂದಿಗೆ ಬಂದರೆ ಮೂವತ್ತು ಲಕ್ಷದಷ್ಟು ಚಿನ್ನದ ನಾಣ್ಯಗಳನ್ನು ಕೊಡುತ್ತೇನೆ ಸ್ವಾಮಿ. ಏನೂ ಸಂದೇಹ ಪಡಬೇಡಿರಿ ಪ್ರಭೂ!" ಎಂದನು ಬಡಸೈನಿಕ.

ರಾಜನು ಬೆಕ್ಕಸ ಬೆರಗಾದನು. ಇವನಿಗೆ ಹುಚ್ಚು ಹಿಡಿದಿಲ್ಲವೆಂದು ಖಚಿತ ಮಾಡಿಕೊಳ್ಳಬೇಕಾದರೆ ಅವನು ಹೇಳುವಲ್ಲಿಗೆ ಹೋಗುವುದೇ ಒಳ್ಳೆಯ ದೆನಿಸಿತು. ಅವನ ಮಾತು ಮುಖ ಲಕ್ಷಣಗಳಲ್ಲಿ ಪ್ರಾಮಾಣಿಕತೆಯೇ ಪ್ರತಿಬಿಂಬಿಸುವುದನ್ನು ರಾಜನು ಗಮನಿಸಿದನು.

ರಾಜನು ಮಂತ್ರಿ, ಸೇನಾನಾಯಕ ಮತ್ತು ಅಂಗರಕ್ಷಕರೊಂದಿಗೆ ಕೆಲ ಮಂದಿ ಸೈನಿಕರನ್ನೂ ಕರೆದುಕೊಂಡು ಬಡ ಸೈನಿಕನೊಂದಿಗೆ ಅರಣ್ಯಕ್ಕೆ ಹೋದನು.

ಅಲ್ಲಿ ಅವನು ತೋರಿಸಿದ ಗುಹೆಯಲ್ಲಿರುವ ನಿಧಿಯನ್ನು ಅವರೆಲ್ಲಾ ನೋಡಿದರು. ರಾಜನು ಅದನ್ನೆಲ್ಲಾ ನಗರಕ್ಕೆ ಸಾಗಿಸಿದನು. ನೆರೆಯಿಂದ ಬಾಧಿತರಾದವರಿಗೆ ಸಹಾಯ ಮಾಡಲು ಆ ಧನವನ್ನು ಉಪಯೋಗಿಸುವಂತೆ ರಾಜನು ಮಂತ್ರಿಗೆ ಹೇಳಿ, ಬಡಸೈನಿಕನನ್ನು ನೋಡಿ, "ನೀನು ಆ ಧನದಲ್ಲಿ ಸ್ವಲ್ಪ ಭಾಗ ತೆಗೆದುಕೊಳ್ಳುವುದು ನ್ಯಾಯವಾಗಿದೆ, ನಿನಗೆ ಎಷ್ಟು ಬೇಕೋ ಅಷ್ಟು ತೆಗೆದುಕೋ" ಎಂದನು.

"ಬೇಡ, ಮಹಾಪ್ರಭುಗಳೇ, ಆ ಧನವನ್ನೆಲ್ಲಾ ಕಷ್ಟಗಳಿಗೆ ಬಿದ್ದ ಪ್ರಜೆಗಳ ಉಪಯೋಗಕ್ಕೆ ವಿನಿ



ಯೋಗಿಸಬೇಕೆಂದು ನನಗೆ ತೋರಿತು. ಅದು ನನ್ನಿಂದಾಗುವ ಕೆಲಸವಲ್ಲ. ಅದೂ ಅಲ್ಲದೆ, ತಮಗೆ ಕಾಣಿಕೆಯಾಗಿ ಕೊಟ್ಟಮೇಲೆ, ತಿರುಗಿ ಸ್ವಲ್ಪ ನಾನು ತೆಗೆದುಕೊಳ್ಳುವುದು ತಪ್ಪೆಂದೂ ಭಾವಿಸುತ್ತೇನೆ" ಎಂದನು ಬಡ ಸೈನಿಕ.

"ಹಾಗಾದರೆ ನನ್ನ ಕೋಶಾಗಾರದಿಂದ ನಿನಗೆ ಕೊಡಿಸುತ್ತೇನೆ. ಮೊದಲು ನೀನು ಬಂದು ನನ್ನ ಸಹಾಯ ಕೇಳಿದವನು ತಾನೆ? ನಿನಗೆ ಸಹಾಯ ಮಾಡಲು ಈಗ ನನಗೆ ಅವಕಾಶವಾಯಿತು" ಎಂದು ಹೇಳಿ ರಾಜನು ಬಡ ಸೈನಿಕನಿಗೆ ಐವತ್ತು ಸಾವಿರ ಚಿನ್ನದ ನಾಣ್ಯಗಳನ್ನು ಕೊಡಿಸಿದನು. ಹಾಗೂ ಅವನ ನ್ಯಾಯ ನಿಷ್ಠತೆಯನ್ನು ಶ್ಲಾಘಿಸಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ಈ ಕಥೆಯಲ್ಲಿ ನನಗೆ ಒಂದು ಸಂದೇಹವಿದೆ. ಕಳ್ಳರ ನಾಯಕನೂ, ಯಾತ್ರಿಕನೂ ಬದುಕಿರುವಷ್ಟು ಕಾಲ ಗುಹೆಯೊಳಗಿನ ಧನದಲ್ಲಿ ಒಂದು ಕಾಸು ಕೂಡ

ಖರ್ಚು ಮಾಡದೆ, ನಾಯಿಯ ಹಾಗೆ ಕಾವಲು ಕಾದು ಸತ್ತು ಹೋದ ಮೇಲೆ, ಪಿಶಾಚಿಗಳಾಗಿ ಆಮೇಲೆ ವಿರಕ್ತಿ ಏಕೆ ಬರಬೇಕು ? ಬಡ ಸೈನಿಕನು ಆ ಧನವನ್ನು ತನ್ನ ಪಾಡಿಗೆ ಸ್ವಂತ ಮಾಡಿಕೊಂಡು ಅನುಭವಿಸಬಹುದಿತ್ತಷ್ಟೇ ? ಹಾಗೇನೂ ಮಾಡದೆ, ಅದನ್ನು ನೋಡಲಿಕ್ಕೂ ಪ್ರಯತ್ನಿಸದೆ ಹೋಗಲು ಕಾರಣವೇನು ? ಈ ಸಂದೇಹಕ್ಕೆ ತಕ್ಕ ಸಮಾಧಾನ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ಸಿಡಿದೇ ಹೋಗುತ್ತದೆ, ಜಾಗ್ರತೆ !" ಎಂದು ಎಚ್ಚರಿಸಿ ಹೇಳಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : " ಲೋಭ ಗುಣದಿಂದ ಧನ ಸೇರಿಸುವುದನ್ನೇ ಗುರಿಯಾಗಿಟ್ಟುಕೊಂಡಿರುವವರು ತಾವು ಅನುಭವಿಸಲಿಕ್ಕೂ ಮನಸ್ಸು ಮಾಡುವುದಿಲ್ಲ. ಸತ್ತು ಹೋಗಿ ಪಿಶಾಚಿಗಳಾದ ಮೇಲೆ ಮತ್ತೆ ಆ ಧನವು ತಮಗೆ ಯಾವ ಪ್ರಯೋಜನಕ್ಕೂ ಬರುವಂತಹುದಲ್ಲವೆಂದು ತಿಳಿಯುತ್ತಾರೆ. ಆ ಕಾರಣದಿಂದಲೇ ಶಾಸ್ತ್ರೋಕ್ತವಾಗಿ ಅಂತ್ಯಕ್ರಿಯೆ ಮಾಡಿಸಿಕೊಂಡು ಪಿಶಾಚ ಜೀವಿತದಿಂದ ಹೊರಬೀಳಬೇಕೆಂದು ತವಕಿಸಿಕೊಂಡಿರುತ್ತಾರೆ. ಸಾಯುವಾಗ ಧನದ ಮೇಲೆಯೇ ಮನಸ್ಸಿಟ್ಟವರೇ ಹಾಗೆ ಪಿಶಾಚಿಯಾಗಿ ಕ್ರಮೇಣ ಪಶ್ಚಾತ್ತಾಪ ಪಡುತ್ತಾರೆ. ಬಡ ಸೈನಿಕನು ಆ ಪಿಶಾಚಿಗಳಿಂದ ಪಾಠ ಕಲಿತು ವಿವೇಕಿಯಾದನು. ಗಯೆಯಲ್ಲಿ ತನಗೆ ಅಂತ್ಯಕ್ರಿಯೆ ಮಾಡದೆ ಆ ನಿಧಿಯನ್ನು ತೋರಿಸಲಾರೆನೆಂದಿತು ಪಿಶಾಚಿ. ಅದಕ್ಕೆ ಕಾರಣವೇನೆಂಬುದನ್ನು ಸೂಕ್ಷ್ಮಬುದ್ಧಿಯ ಸೈನಿಕನು ಗ್ರಹಿಸಿಕೊಂಡನು. ಒಂದು ಸಾರಿ ಆ ನಿಧಿಯನ್ನು ಕಣ್ಣಿನಿಂದ ನೋಡಿಬಿಟ್ಟರೆ ತನ್ನ ಹಾಗೆ ಅವನೂ ಧನದ ವ್ಯಾಮೋಹದಲ್ಲಿ ಬಿದ್ದು ಅಲ್ಲೇ ಇದ್ದುಬಿಡುವನೆಂದು ಪಿಶಾಚಿಗೆ ಅನುಮಾನವಾಗಿತ್ತು. ಕೊಲೆ, ಕೊಳ್ಳೆ, ಮೋಸಗಳಿಂದ, ಅನೇಕ ಹಿಂಸೆಗಳಿಂದ ಕೂಡಿಹಾಕಲ್ಪಟ್ಟ ಆ ಧನವನ್ನು, ಪಾಪದ ಸಂಗ್ರಹವನ್ನು ರಾಜನ ಮೂಲಕ ಸಾರ್ವಜನಿಕರ ಸೇವೆಗೆ ಉಪಯೋಗಪಡಿಸುವುದೇ ಸರಿಯೆಂದು ಅವನಿಗೆ ತೋರಿತು. ಅಂತಲೇ ಮುಂದಾಗಿ ಅದನ್ನು ನೋಡಲೂ ಅವನು ಹೆದರಿದನು. ಅದನ್ನು ನೋಡಿದ ಮೇಲೆ ತಾನೇ ಪುಣ್ಯಕ್ಕೆ ಹೊರಟಿದ್ದ ಯಾತ್ರಿಕನು ಪಿಶಾಚಿಯಾಗುವಂತಾಯಿತು ? ಧನಕ್ಕೆ ಕಾವಲಾಗಿರುವವನು ಧನದ ಆಳಿನ ಹಾಗೆ ಆಗಿಬಿಡುತ್ತಾನೆ. ತನಗೆ ಅಂತಹ ದುರ್ದೆಶೆ ಬರಬಾರದೆಂದೇ ಬಡ ಸೈನಿಕನು ಜಾಗರೂಕನಾಗಿ ವರ್ತಿಸಿದನು. ಅದರಲ್ಲಿ ಭಾಗ ತೆಗೆದುಕೊಳ್ಳಲಿಕ್ಕೂ ಅವನು ಒಪ್ಪಲಿಲ್ಲ."

ಹೀಗೆ ರಾಜನ ಮೌನ ಭಂಗವಾದ ಕೂಡಲೇ ಬೇತಾಳವು ಶವ ಸಮೇತ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಹಿಡಿದು ನೇತಾಡಿತು.





# ಬದ್ಧ ಶತ್ರುಗಳು

ಕೊಳುಪಾಳ್ಯವೆಂಬ ಒಂದು ಊರಿನಲ್ಲಿ ರಂಗಪ್ಪ ಮತ್ತು ಸಂಕಪ್ಪ ಎಂಬ ಸಾಧಾರಣದ ರೈತರಿಬ್ಬರು ವಾಸವಾಗಿದ್ದರು. ಇಬ್ಬರ ಮನೆಗಳಿಗೂ ಮಧ್ಯದಲ್ಲಿ ಸಣ್ಣದೊಂದು ಗೋಡೆ ಮಾತ್ರವೇ ಅಡ್ಡವಾಗಿತ್ತು. ಇಬ್ಬರ ಹೊಲಗಳು ಕೂಡಾ ಅಕ್ಕಪಕ್ಕದಲ್ಲೇ ಇದ್ದುವು. ಇಬ್ಬರೂ ರೈತ ವೃತ್ತಿಯಲ್ಲಿ ಒಳ್ಳೇ ಅನುಭವ ಉಳ್ಳವರಾಗಿದ್ದರು. ಆದರೇನು ಮಾಡುವುದು ? ಅಸೂಯೆಯೊಂದು ಇಬ್ಬರನ್ನೂ ಹಿಡಿದುಕೊಂಡಿತ್ತು. ಇಬ್ಬರೂ ಒಬ್ಬರಿಗೊಬ್ಬರು ತಿಳಿಯದಂತೆ ಎರಡನೆಯವನಿಗೆ ನಷ್ಟಪಡಿಸಲು ಏನು ಮಾಡುವುದೆಂದು ಆಲೋಚಿಸುತ್ತಾ ಕರುಬಿಕೊಂಡಿರುವರು. ಅದು ಗೊತ್ತಾಗದಂತೆ ಮಾಡಬೇಕಾದ ಕೆಲಸವಾದುದರಿಂದ, ಏನು ಮಾಡಲೂ ಸಾಧ್ಯವಾಗದೆ ಕೈಕೈ ಹಿಸುಕಿಕೊಳ್ಳುವರು ಅಷ್ಟೇ.

ಒಂದು ವರ್ಷ ಇಬ್ಬರೂ ತಮ್ಮ ಹೊಲಗಳಲ್ಲಿ ಜೋಳವನ್ನು ಬೆಳೆಸಿದರು, ಇಬ್ಬರ ಹೊಲಗಳಲ್ಲಿಯೂ ಜೋಳವು ವಿಪುಲವಾಗಿ ಬೆಳೆಯಿತು. ಹಾಲು ತುಂಬಿದ ಎಳೆ ಕದಿರುಗಳು ಸೊಂಪಾಗಿ ಬಂದುವು. ಈ ಸಮಯದಲ್ಲಿ ಕಾಡು ಮೃಗಗಳಿಂದಲೂ ಪಕ್ಷಿಗಳಿಂದಲೂ ಕೇಡುಬಾರದಂತೆ, ಇಬ್ಬರೂ ರಾತ್ರಿಯಲ್ಲಿ ತಮ್ಮ ತಮ್ಮ ಹೊಲವನ್ನು ಕಾಯಲು ಹೋಗುತ್ತಾ ಇದ್ದರು. ರಂಗಪ್ಪನ ಹೊಲಗಳ ಸೊಂಪು ನೋಡುತ್ತ ಸಂಕಪ್ಪ " ಇವನ ಹೊಲದ ಬೆಳೆ ಈ ಸಾರಿ ಭಲೇ ಜೋರಾಗಿ ಬರುವ ಹಾಗಿದೆ. ಒಂದೊಂದು ಕದಿರಿನಲ್ಲಿಯೂ ಸೇರು ಸೇರು ಜೋಳ ಬೀಳುವ ಹಾಗಿದೆ!" ಎಂದುಕೊಂಡನು ಅಸೂಯೆಯಿಂದ.

ಸಂಕಪ್ಪನ ಹೊಲನೋಡಿ ರಂಗಪ್ಪನು ಕೂಡಾ ಅಂದುಕೊಂಡನು. "ಎಲೆಲಾ ! ಈ ರಂಗಪ್ಪ ಈ ವರ್ಷದ ಜೋಳದಿಂದ ಕುಬೇರನಾಗುವ ಹಾಗಿದೆ ! ಮತ್ತೆ ಅವನನ್ನು ಹಿಡಿಯುವವರೇ ಇಲ್ಲ !" ಎಂದು ಕರುಬಿಕೊಂಡನು.

ಒಂದು ದಿನ ಸಂಕಪ್ಪನ ಹೆಂಡತಿ ಗಂಡನೊಂದಿಗೆ, " ಆ ರಂಗಪ್ಪನ ಹೇಂಡ್ತಿ ಹೇಗೆ ಹಾರ್ತಾಳೆ ನೋಡಿದಿರಾಂತ ? ಈ ವರ್ಷ ಜೋಳದ ಬೆಳೆಯಿಂದ ಬಂದ ಹಣದಲ್ಲಿ ಗಂಡ ಅವಳಿಗೆ ಮುತ್ತಿನ ಗೊಲುಸು ಮಾಡ್ಸಿ ಹಾಕ್ತಾನಂತೆ. ಅವಳು ಮುತ್ತಿನ ಗೊಲುಸು ಹಾಕ್ಕೊಂಡು ಕುಲುಕುತ್ತಾ ಇದ್ರೆ ನಾನು ಬೋಳು ಕುತ್ತಿಗೇಲಿ ಹೇಗೆ ತಿರುಗಲಿ ?" ಎಂದಳು ರೋಷ

ಜಿ. ಸಾಂಬ



ದಿಂದ. ಸಂಕಪ್ಪನು ಹೆಂಡತಿಯನ್ನು ಸಮಜಾಯಿಸುತ್ತಾ, "ತಡಿ, ತಡೀ! ಮನೆಸಾರಿಸಿದ ಕೂಡಲೇ ಹಬ್ಬ ಆಗಿ ಹೋಗೋದಿಲ್ಲ, ಬೆಳೆ ಕೈಗೆ ಬಂದು ಮಾರಿ ಎಲ್ಲಾ ಆದ ಮೇಲೆ ತಾನೇ? ಅವನಿಗಿಂತ ಮೊದಲು ನಾನೇ ನಿನಗೆ ಕಲ್ಲಿನ ಪದಕದ ಗೊಲುಸು ಮಾಡ್ಸಿ ಹಾಕ್ತೀನೆ. ಏನೆಂದುಕೊಂಡಿ ನನ್ನನ್ನು!" ಎಂದನು ಎದೆಯುಬ್ಬಿಸಿ.

ಅವರಿಬ್ಬರ ನಡುವೆ ನಡೆದ ಈ ಸಂಭಾಷಣೆ ಗೋಡೆಯಾಚೆಗಿದ್ದ ರಂಗಪ್ಪನ ಹೆಂಡತಿಯ ಕಿವಿಗೆ ಬಿತ್ತು. ಅವಳು ಗುಡು ಗುಡು ತನ್ನ ಗಂಡನ ಬಳಿಗೆ ಹೋಗಿ, "ಕೇಳಿದಿರಾ. ಆ ಸಂಕಪ್ಪ ಹೆಂಡ್ತೀ ಹತ್ತಿರ ಏನು ಹೇಳಿದಾ ಅಂತ? ಈ ವರ್ಷ ಅವನ ಜೋಳದ ಬೆಳೆ ಕೈಗೆ ಬಂದ ಕೂಡಲೇ ಹೆಂಡ್ತೀಗೆ ವಜ್ರ ಪದಕದ ಗೊಲುಸು ಮಾಡ್ಸಿ ಹಾಕ್ತಾನಂತೆ! ಈ ವರ್ಷ ನಮ್ಮ ಬೆಳೆ ನಮ್ಮ ಕೈಗೆ ಬಂದರೆ ತಾನೇ ಮುತ್ತಿನ ಗೊಲುಸು ಅನ್ನುತ್ತಾನೆ!" ಎಂದಳು.

ಜಗಲಿಯ ಗೋಡೆಗೆ ಆತು ಕುಳಿತಿದ್ದ ರಂಗಪ್ಪ, ಕೋಪದಿಂದೆದ್ದು, ಮೇಲ್ವಸ್ತ್ರ ಕೊಡರಿ ಭುಜಕ್ಕೇರಿಸಿಕೊಂಡು, "ಆಹಾಂ! ಏನಂದಾ? ನಮ್ಮ ಬೆಳೆ ನಮ್ಮ ಕೈಗೆ ಬಾರದ ಹಾಗೆ ಮಾಡ್ತಾನಂತೇನು? ನಮ್ಮ ಬೆಳೆ ಹೇಗೆ ನಮ್ಮ ಕೈಗೆ ಬರುವುದಿಲ್ಲವೋ, ಅವನ ಬೆಳೆ ಹೇಗೆ ಅವನ ಕೈಗೆ ಬರುತ್ತೋ ನೋಡುತ್ತೇನೆ!" ಎಂದನು.

ಆ ಕೂಡಲೇ ಅವನು ಮೂಡುಕೋಡಿಯ ಕೆರೆಯ ದಂಡೆಯ ತೋಪಿನೊಳಗೆ ಗುಡಿಸಲು ಕಟ್ಟಿಕೊಂಡಿದ್ದ ಮಂತ್ರದ ಮಾರಿಕಾಳನ ಮನೆಗೆ ಹೋದನು. ಮಾರಿಕಾಳನು ಕ್ಷುದ್ರ ದೇವತೆಗಳ ಉಪಾಸಕನೆಂದು ಪ್ರಸಿದ್ಧನಾದವನು.

"ಮಾರಿಕಾಳಯ್ಯನವರೇ, ನೀವು ನನಗೊಂದು ಸಣ್ಣ ಸಹಾಯ ಮಾಡಬೇಕು. ರಾತ್ರಿಯ ಹೊತ್ತಿನಲ್ಲಿ ಸುಮಾರು ನಾಲ್ಕೈದು ಗಂಟೆ ಹೊತ್ತಿನವರೆಗೆ ನಾನು ಯಾವುದೋ ಒಂದು ಪ್ರಾಣಿಯಾಗಿರುವ ಹಾಗೆ ಮಂತ್ರವೋ ಮದ್ದೋ ಇದ್ದರೆ ಕೊಡುವಿರಾ?" ಎಂದು ಕೇಳಿದನು ರಂಗಪ್ಪ.

ಮಾರಿಕಾಳನು ಮನೆಯ ಮಾಡಿನೆಡೆಯಿಂದ ಚಿಕ್ಕ ಚಿಕ್ಕ ಮೂರು ಪೊಟ್ಟಣಗಳನ್ನು ತೆಗೆದು, "ನೋಡಿ, ನೀವು ಕುದುರೆಯೋ, ಎತ್ತೋ ಆಗ ಬೇಕಾಗಿದ್ದರೆ ನೂರು ರೂಪಾಯಿ ಕೊಡಬೇಕಾಗುತ್ತದೆ. ಕತ್ತೆಯಾಗಿ ಬದಲಾಯಿಸಲು ಮಾತ್ರ ಐವತ್ತು ಸಾಕು. ಬೆಕ್ಕು ನಾಯಿಗಳಾಗ ಬೇಕಾದರೂ ಅಷ್ಟೇ" ಎಂದನು.

"ನನ್ನ ಕೆಲಸಕ್ಕೆ ಕತ್ತೆಯ ರೂಪವೇ ಸಾಕು" ಎಂದು ಹೇಳಿ ರಂಗಪ್ಪನು ಐವತ್ತು ರೂಪಾಯಿ ಕೊಟ್ಟು, ಮಾರಿಕಾಳನು ಕೊಟ್ಟ ಒಂದು ಮಂತ್ರದ ಪುಡಿಯ ಪೊಟ್ಟಣ ಪಡೆದುಕೊಂಡು ಹೋದನು.

ಅದೇ ಸಮಯದಲ್ಲಿ ಸಂಕಪ್ಪನು ಕೆರೆ ದಂಡೆಯ ತೆಂಕು ತೀರದಲ್ಲಿರುವ ಕರಂಡೆ, ಕಾಸರ್ಕ, ಸೂರಿ ಮುಳ್ಳು, ನಾಗರಮುಳ್ಳು ಪೊದರುಗಳಾಚೆಗಿರುವ



ಚಿಕ್ಕ ಗುಡಿಸಲಿನಲ್ಲಿ ಕಾಲ ಕಳೆಯುವ ಮಾಯದ ಮುಸುಗಜ್ಜಿಯ ಬಳಿಗೆ ಹೋಗಿ, "ನೋಡವ್ವಾ, ನೀನು ನನಗೊಂದು ಸಣ್ಣ ಉಪಕಾರ ಮಾಡ ಬೇಕಾಗಿದೆ. ರಾತ್ರಿಯ ಹೊತ್ತಿನಲ್ಲಿ ಯಾವುದಾದ ರೊಂದು ಪ್ರಾಣಿಯಾಗಿ ತಿರುಗಬೇಕೆಂದು ನನಗೆ ಬಹಳ ದಿನಗಳಿಂದ ಆಶೆಯಾಗಿದೆ, ಅದಕ್ಕೇನಾದರೂ ಉಪಾಯ ಮಾಡಿಕೊಡುವಿಯಾ ?" ಎಂದು ಕೇಳಿದನು.

ಮುಸುಗಜ್ಜಿ ತಲೆಯೆತ್ತಿ ಸಂಕಪ್ಪನನ್ನು ಅರೆ ಮುಚ್ಚಿದ ಕಿಡಿಗಣ್ಣಿನಿಂದ ಸ್ವಲ್ಪ ಹೊತ್ತು ನೋಡಿ, "ನೋಡವ್ವಾ ಮಗಾ; ಬರೀ ಉಪಾಯದಿಂದ ಕೆಲಸ ಆಗುವ ಕಾಲ ಇದಲ್ಲ. ನಿನ್ನನ್ನು ಜಳಜಳ ಕಾಣುವ ಹಾಗೆ ಬಿಳಿಯ ಆನೆಯಾಗಿ, ಅಲ್ಲದಿದ್ದರೆ ಪಂಚಕಲ್ಯಾಣಿ ಕುದುರೆಯಾಗಿ ಮಾಡುವಂಥಾ ದೊಡ್ಡ ದೊಡ್ಡ ಗೊಡವೆಗಳನ್ನು ಬಿಟ್ಟಿದ್ದೇನಪ್ಪಾ. ಅದೆಲ್ಲಾ ತಲೆ ಮೀರಿದ ಕಾರ್ಯ. ಒಂದು ಐವತ್ತು ರೂಪಾಯಿ ಕೊಟ್ಟೀಯಾದ್ರೆ ಒಂದು ಮಂತ್ರದ ಪುಡಿ ಕೊಡ್ತೇನೆ. ಅದನ್ನು ಬಾಯಿಗೆ ಹಾಕಿ ಅಂಗೈ ಗುಂಡಿ ತುಂಬುವಷ್ಟು ನೀರು ಕುಡಿದು ಬಿಟ್ರೆ ರಾತ್ರಿ ಒಂದು ಜಾಮ ಕಳೆದ ಮೇಲೆ ನಾಲ್ಕು ಗಂಟೇ ಹೊತ್ತು ಊರೊಳಗಿನ ಯಾವುದೋ ಒಂದು ಪ್ರಾಣಿನ ನೆನೆಸಿಕೊಂಡ್ರೇ ಹಾಗೇ ಆಗುತ್ತೀ ? ಅದು ಆಗಬಹುದಾದರೆ ಹೇಳು " ಎಂದಳು.

ಸಂಕಪ್ಪನು ಐವತ್ತು ರೂಪಾಯಿ ಕೊಟ್ಟು ಮುಸುಗಜ್ಜಿ ಕೊಟ್ಟ ಒಂದು ಪುಡಿ ಪೊಟ್ಟಣವನ್ನು ತೆಗೆದುಕೊಂಡನು. ಅದನ್ನು ನುಂಗಿ ಕತ್ತೆಯರೂಪ ತಾಳುವುದೇ ಒಳ್ಳೇದೆಂದು ಅವನಿಗೆ ತೋರಿತು. ಮುಂದಿನದನ್ನು ತಿನ್ನಲಿಕ್ಕೂ, ಹಿಂದಿನದನ್ನು ಒದೆಯಲಿಕ್ಕೂ, ಶಬ್ದದಿಂದ ಹೆದರಿಸಲಿಕ್ಕೂ ಅದು ಸೌಕರ್ಯವಾಗುತ್ತದೆಂದುಕೊಂಡು, ರಾತ್ರಿಯಲ್ಲಿ ಮಂತ್ರದ ಪುಡಿ ನುಂಗಿ ಸಂಕಪ್ಪನು ಕತ್ತೆಯಾದನು.

ಅದೇ ಹೊತ್ತಿಗೆ ರಂಗಪ್ಪನೂ ಕತ್ತೆಯ ರೂಪ ತಾಳಿ, ಸಂಕಪ್ಪನ ಹೊಲದಲ್ಲಿ ಕಾವಲಿನವರಿಲ್ಲದುದನ್ನು ನೋಡಿ, ಆ ಹೊಲದೊಳಗೆ ನುಗ್ಗಿ ಪೈರನ್ನೆಲ್ಲ ಕಡಿದು ಮೆಟ್ಟಿ ಎಲ್ಲಾ ನಾಶಮಾಡ ತೊಡಗಿದನು. ಯಾರಾದರೂ ಬಂದು ತಡೆಯುವ ಮೊದಲೇ ಕೆಲಸ ಮುಗಿಸುವ ಆತುರದಲ್ಲಿ ಚುರುಕಾಗಿ ದಾಳಿ ನಡೆಸಿತು ರಂಗಪ್ಪ ಕತ್ತೆ.

ಹಾಗೆಯೇ ಸಂಕಪ್ಪ ಕತ್ತೆ ಕೂಡಾ ರಂಗಪ್ಪನ ಜೋಳದ ಹೊಲದೊಳಗೆ ತೂರಿ ಸರ್ವವನ್ನೂ ನಾಶನಮಾಡ ತೊಡಗಿತು. ಈ ವಿಧವಾಗಿ ಎರಡು ಕತ್ತೆಗಳೂ ತಮ್ಮ ತಮ್ಮ ಶತ್ರುವಿನ ಹೊಲದ ಪೈರನ್ನು ನೆಲಸಮ ಮಾಡುತ್ತ, ಬೆಳಂಜಾಮದ ಹೊತ್ತಿನಲ್ಲಿ ಹೊಲವನ್ನು ಬಿಟ್ಟು ಮೇಲೆ ಬಂದು ಒಂದನ್ನೊಂದು ನೋಡಿಕೊಂಡುವು.

ಆ ಸಮಯದಲ್ಲಿ ರಂಗಪ್ಪ, ಸಂಕಪ್ಪರು ತಾವು ಏನು ಕೆಲಸ ಮಾಡಿದೆವೆಂಬುದನ್ನು ತಿಳಿದುಕೊಂಡರು.

ಇಬ್ಬರೂ ಹಿಡಿಸಲಾರದಷ್ಟು ಕೋಪದಿಂದ ಓಂಡ್ರುಗುಡುತ್ತ, ಕಾಲಿನಿಂದ ಒಬ್ಬರನ್ನೊಬ್ಬರು ಒದೆದುಕೊಳ್ಳುತ್ತ, ಬಾಯಿಯಿಂದ ಕಚ್ಚುತ್ತ, ಹೋರಾಡ ತೊಡಗಿದರು. ಈ ಕತ್ತೆಗಳ ಹೋರಾಟದ ಗಲಾಟೆ ಕೇಳಿ, ದೂರದ ಹೊಲಗಳಲ್ಲಿ ಕಾವಲು ಕಾಯುತ್ತಿದ್ದವರು ಓಡೋಡಿ ಅಲ್ಲಿಗೆ ಬಂದರು. ಹಾಳಾಗಿ ಹೋದ ರಂಗಪ್ಪ ಸಂಕಪ್ಪರ ಜೋಳದ ಹೊಲಗಳ ಹತ್ತಿರ ಎರಡು ಕತ್ತೆಗಳೊಳಗೆ ಮಾರಾಮಾರಿ ನಡೆಯುವುದನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಹಾಯ್ ಹಾಯ್ ಎಂದು ಕೂಗಿ ಹೆದರಿಸಿ ಅವೆರಡನ್ನೂ ಬೇರೆ ಬೇರೆ ಮಾಡಲು ನೋಡಿದರು. ಹೊಡೆಯಲು ಕೋಲುಗಳನ್ನು ಎತ್ತಿದರು.

ಅಷ್ಟರಲ್ಲಿ ಮಂತ್ರದ ಪುಡಿಯ ಪ್ರಭಾವ ಅಳಿದು ಹೋದುದರಿಂದ, ರಂಗಪ್ಪ ಸಂಕಪ್ಪರ ಕತ್ತೆಯ ರೂಪಗಳು ಹೋಗಿ ನಿಜರೂಪಗಳು ಬಂದು ಬಿಟ್ಟುವು.

ಕಾವಲುಗಾರರು ಇನ್ನಿಷ್ಟು ಆಶ್ಚರ್ಯದಿಂದ ಸ್ತಂಭಿಸಿ ನಿಂತರು. ಕಡೆಗೆ ಅಸಲು ವಿಷಯ ತಿಳಿದು ಛೀತ್ಕರಿಸಿ, "ಹೀಗೂ ಮಾಡುವುದೆ? ಅಕ್ಕಪಕ್ಕದ ರಂಗಪ್ಪ ಸಂಕಪ್ಪರಾ ನೀವು! ಛೀ ಛೀ! ನಿಮ್ಮೊಳಗಿನ ಶತ್ರುಭಾವ ಎಂಥಾ ನೀಚಕಾರ್ಯಕ್ಕಿಳಿಸಿ ಬಿಟ್ಟಿತು!" ಎಂದು ಹಳಿದಾಡಿ ಹೊರಟುಹೋದರು.

ಆ ಮಾತುಗಳನ್ನು ಕೇಳಿ ರಂಗಪ್ಪ ಸಂಕಪ್ಪರು ತಲೆತಗ್ಗಿಸಿ ಸುಮ್ಮನೆ ನಿಂತರು. ಅವಮಾನದಿಂದ ಸತ್ತ ಹಾಗಾದರು ಇಬ್ಬರೂ, ಇಬ್ಬರ ಕಣ್ಣುಗಳೂ ತುಂಬಿದುವು. "ಬುದ್ಧಿ ಬಂತು" ಎಂದು ಇಬ್ಬರೂ ಮುಣುಮುಣಿಸಿಕೊಂಡರು. ರಂಗಪ್ಪನ ಕೈಗಳು ಸಂಕಪ್ಪನ ಕಡೆಗೆ ಎದ್ದಿತು. ಸಂಕಪ್ಪನ ಕೈಗಳೂ ರಂಗಪ್ಪನ ಕಡೆಗೆ ಹಾಗೆಯೇ ಎದ್ದುವು. ಇಬ್ಬರೂ ಒಬ್ಬರನ್ನೊಬ್ಬರು ಗಟ್ಟಿಯಾಗಿ ಆಲಿಂಗಿಸಿಕೊಂಡರು.

"ನಮ್ಮ ಹೊಲಗಳನ್ನು ನಾವೇ ನಾಶಮಾಡಿಕೊಂಡೆವು. ಈ ವರ್ಷದ ನಮ್ಮ ಗತಿ ಹಾಳಾಯಿತು" ಎಂದನು ರಂಗಪ್ಪ.

ಸಂಕಪ್ಪನು ಕಣ್ಣೀರು ಒರೆಸಿಕೊಂಡು, "ನಾವು ಒಂದೇ ಊರಿನವರು ಮಾತ್ರವಲ್ಲದೆ, ಅಕ್ಕ ಪಕ್ಕದ ಮನೆಯವರು, ಅಕ್ಕಪಕ್ಕದ ಹೊಲಗಳುಳ್ಳವರು. ನಾವು ಹಗೆಬಿಟ್ಟು ಮಿತ್ರರಾದರೇನೇ ಸುಖ ನೆಮ್ಮದಿ ಎಲ್ಲಾ. ಈಸಾರಿಯ ನಷ್ಟ ಬುದ್ಧಿಕಲಿತ ಪಾಠಕ್ಕೆ ಪ್ರತಿಫಲವಾಯಿತು, ಬಿಡಣ್ಣ" ಎಂದನು.

"ನಿಜ, ಸಂಕಪ್ಪತಮ್ಮಾ, ನಿಜ. ಒಳ್ಳೆಯ ಬುದ್ಧಿ ಕಲಿಯಲು ಇದೊಂದು ಸಣ್ಣ ಬೆಲೆ ಅಷ್ಟೇ" ಎಂದು ರಂಗಪ್ಪನೂ ಮುಗುಳು ನಕ್ಕನು. ಇಬ್ಬರೂ ಪ್ರಸನ್ನ ಮುಖರಾಗಿ ಕೈಕೈ ಹಿಡಿದುಕೊಂಡು ಹೋದರು. ಅವರೊಳಗಿನ ಅಸೂಯೆ ಹೇಳ ಹೆಸರಿಲ್ಲದೆ ಹೋಯಿತು.





# ವಿಚಿತ್ರ ಜಾತಕ

ಬ್ರಹ್ಮದತ್ತನು ಕಾಶೀರಾಜ್ಯವನ್ನು ಆಳಿಕೊಂಡಿದ್ದ ಕಾಲದಲ್ಲಿ ಕಳಿಂಗರಾಜ್ಯದೊಳಗೆ ಅನೇಕ ದೊಡ್ಡ ನಗರಗಳಿದ್ದುವು. ಅವುಗಳಲ್ಲಿ ಪ್ರಭುವಾದ ಕಳಿಂಗನು ದಾಂತಿಪುರವೆಂಬ ನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಈ ಕಳಿಂಗರಾಜನಿಗೆ ದೊಡ್ಡ ಕಳಿಂಗ ಮತ್ತು ಸಣ್ಣ ಕಳಿಂಗ ಎಂಬ ಇಬ್ಬರು ಕುಮಾರರಿದ್ದರು. ಇವರಿಬ್ಬರ ಜಾತಕಗಳನ್ನು ಪರೀಕ್ಷಿಸಿ ನೋಡಿದ ಮೇಲೆ ದೈವಜ್ಞರು ರಾಜನೊಂದಿಗೆ ಹೀಗೆಂದರು :

" ತಂದೆಯ ಅನಂತರ ದೊಡ್ಡವನೇ ರಾಜನಾಗಿ ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತಾನೆ, ಚಿಕ್ಕವನದು ವಿಚಿತ್ರವಾದ ಜಾತಕವಾಗಿದೆ. ಅವನಿಗೆ ಜೀವನವಿಡೀ ಸನ್ಯಾಸಿಯ ಯೋಗವೇ. ಹಾಗಿದ್ದರೂ ಮಹಾರಾಜನಾಗುವ ಯೋಗವುಳ್ಳ, ಅದೃಷ್ಟವಂತ ಕುಮಾರನು ಅವನಿಗೆ ಹುಟ್ಟುತ್ತಾನೆ ! "

ದೊಡ್ಡ ಕಳಿಂಗ, ಸಣ್ಣ ಕಳಿಂಗರು ಬೆಳೆದು ಪ್ರಾಯಕ್ಕೆ ಬರಲು, ಕಳಿಂಗರಾಜನು ಕಾಲಗತಿಯ ಗೈದಿದನು. ಕ್ರಮ ಪ್ರಕಾರ ದೊಡ್ಡ ಮಗನೇ ಸಿಂಹಾಸನವೇರಿ ರಾಜನಾದನು. ಸಣ್ಣ ಕಳಿಂಗನಿಗೆ ರಾಜ ಪ್ರತಿನಿಧಿಯ ಪದವಿ ಬಂದಿತು. ಮುಂದೆ ತನಗೆ ಹುಟ್ಟುವ ಮಗನು ರಾಜಯೋಗವುಳ್ಳ ಅದೃಷ್ಟಶಾಲಿಯೆಂದು ಜೋಯಿಸರು ಹೇಳಿದ ಮಾತು ಸಣ್ಣ ಕಳಿಂಗನ ಮನಸ್ಸಿನಲ್ಲಿತ್ತು. ಅದೊಂದು ಹೆಮ್ಮೆಯ ಭಾವನೆಯಿಂದ ಅವನು ಅಣ್ಣನಿಗೆ ಬಾಗಿಕೊಂಡಿರದೆ, ಸ್ವತಂತ್ರ ರಾಜನಂತೆ ವ್ಯವಹರಿಸಲು ತೊಡಗಿದನು. ಅದರಿಂದ ಅಣ್ಣತಮ್ಮಂದಿರ ನಡುವೆ ಮನಸ್ತಾಪಗಳು ಪ್ರಾರಂಭವಾದುವು. ಕಡೆಗೆ ಅಣ್ಣನು ತಮ್ಮನನ್ನು ಬಂಧಿಸಿ ತರುವಂತೆ ಭಟರಿಗೆ ಆಜ್ಞೆ ಮಾಡಿದನು.

ಆ ಕಾಲದಲ್ಲಿ ಬೋಧಿಸತ್ವನು ಮಾನವಾವತಾರವನ್ನೆತ್ತಿ, ಕಳಿಂಗ ರಾಜ್ಯದ ಮಂತ್ರಿಗಳಲ್ಲಿ ಒಬ್ಬನಾಗಿದ್ದನು. ದೊಡ್ಡ ಕಳಿಂಗನ ಕಾಲದಲ್ಲಿ ಆ ಮಂತ್ರಿ ವೃದ್ಧನಾಗಿದ್ದನು. ರಾಜ ಕುಟುಂಬದ ಕ್ಷೇಮವನ್ನೇ ಹಾರೈಸುವ ಆ ಮಂತ್ರಿ ಸಣ್ಣ ಕಳಿಂಗನ ಬಳಿಗೆ ಬಂದು, ರಹಸ್ಯವಾಗಿ ರಾಜಾಜ್ಞೆಯನ್ನು ಅವನಿಗೆ ಮುಂದಾಗಿಯೇ ತಿಳಿಸಿದನು. ತನಗೆ ಬರಲಿರುವ ಅವಮಾನದ ಗತಿಯನ್ನು ತಿಳಿದು ಸಣ್ಣ ಕಳಿಂಗನು, ಆ ವೃದ್ಧ ಮಂತ್ರಿಯೊಂದಿಗೆ,

ವಾದ ಹೂಗಳನ್ನು ಸೇರಿಸಿಟ್ಟು, ದಾರದಿಂದ ಅತಿ ಸುಂದರವಾದ ಒಂದು ದಂಡವನ್ನು ಕಟ್ಟಿದಳು.

ಕುಟೀರದ ಹತ್ತಿರವಿರುವ ನದಿಯ ಬದಿಯಲ್ಲಿ ಒಂದು ಗಿಣಿ ಮಾವಿನ ಮರವಿದ್ದಿತು. ಮಗಧರಾಜ ಪುತ್ರಿ ಆ ಮಾವಿನ ಮರದ ಮೇಲೇರಿ, ಕೊಂಬೆಯಲ್ಲಿ ಕುಳಿತುಕೊಂಡು, ತಾನು ಕಟ್ಟಿದ ಹೂವಿನ ದಂಡವನ್ನು ನೀರಿಗೆ ಬಿಸುಟು, ಅದು ಸಾಗುವ ಚಂದವನ್ನು ನೋಡುತ್ತಿದ್ದಳು.

ಆ ಹೂವಿನ ದಂಡವು ಆಡಾಡಿಕೊಂಡು ತೇಲುತ್ತಾ, ಹೋಗಿ, ನದಿಯಲ್ಲಿ ಸ್ನಾನ ಮಾಡಿಕೊಂಡಿದ್ದ ಸಣ್ಣ ಕಳಿಂಗನ ತಲೆಗೆ ತಾಗಿತು.

ಅವನು ಅದನ್ನು ಎತ್ತಿಕೊಂಡು, ಅದರ ಕಲಾ ನೈಪುಣ್ಯತೆಗೆ ಆಶ್ಚರ್ಯಪಡುತ್ತ, "ಎಷ್ಟು ಚೆನ್ನಾಗಿದೆ! ಎಷ್ಟು ಬಣ್ಣಗಳ ಹೂಗಳು ! ಅವುಗಳನ್ನು ಸೊಗಸಾಗಿ ಅಣಿಗೊಳಿಸಿ ನೇದ ಜಾಣ್ಮೆ ! ಹೀಗೆ ಹೆಣೆದು ಕೊಡ ಕೈಗಳುಳ್ಳವಳು ಎಷ್ಟು ಸುಂದರಿಯಾಗಿರಬೇಡ ! ಈ ಗಾಢಾರಣ್ಯದಲ್ಲಿ ಅಂತಹ ಸುಂದರೀ ಮಣಿಗೆ ಏನು ಕೆಲಸವಿದ್ದೀತು ? " ಎಂದು ಬಗೆ ಬಗೆಯಾಗಿ ಆಲೋಚನೆ ಮಾಡಿದನು. ಹೂದಂಡ ಹೆಣೆದವಳನ್ನು ನೋಡಲೇಬೇಕೆಂದು ಅವನ ಮನಸ್ಸು ಕುತೂಹಲಪಡತೊಡಗಿತು.

ಈ ಸಂಕಲ್ಪದಿಂದ ಕಳಿಂಗನು ಅರಣ್ಯದಲ್ಲಿ ಅಲೆದಾಡುತ್ತಿದ್ದಾಗ, ಒಂದು ಕಡೆಯಲ್ಲಿ ಕಿವಿಗೆ ಇಂಪಾಗಿ ಹೊರಡುವ ಕಂಠಸ್ವರವು ಕೇಳಿಸಿ ನಿಂತನು. ಅವನು ಅತ್ತಿತ್ತ ನೋಡುವಾಗ, ಮಾವಿನ ಮರದ ಕೊಂಬೆಯಲ್ಲಿ ಕುಳಿತುಕೊಂಡು ಹಾಡುವ ಸುಂದರಿಯೊಬ್ಬಳನ್ನು ಕಂಡನು.

ರಾಜಪುತ್ರಿಯನ್ನು ನೋಡಿ ಸಣ್ಣ ಕಳಿಂಗನು ಪರವಶನಾಗಿ, ಅವಳೊಡನೆ ಕುಶಲ ಪ್ರಶ್ನೆಗಳನ್ನು ಪ್ರಾರಂಭಿಸಿದನು. ಕಡೆಗೆ ಅವಳನ್ನು ಮ ದು ವೆಯಾಗಲು ತನಗಿರುವ ಕೋರಿಕೆಯನ್ನೂ ತಿಳಿಸಿದನು. ಅದನ್ನು ಕೇಳಿ ಅವಳು, " ಅದು ಹೇಗಾದೀತು ? ನೀವು ಋಷಿ ಸಂತತಿಯವರಾಗಿರುವಿರಿ. ನಾವು ಕ್ಷತ್ರಿಯರು ! " ಎಂದಳು.



"ನಾನೂ ಕ್ಷತ್ರಿಯನೇ" ಎಂದು ಸಣ್ಣ ಕಳಿಂಗನು ತನ್ನ ಜಾತಕದ ಗುಟ್ಟುಮಟ್ಟುಗಳನ್ನೆಲ್ಲಾ ಬಿಡಿಸಿ ಹೇಳಿದನು. ಆಗ ರಾಜಕುಮಾರಿ ತನ್ನ ಪರಿಸ್ಥಿತಿಗಳನ್ನು ಕೂಡಾ ಏನೂ ಮುಚ್ಚು ಮರೆ ಮಾಡದೆ ಅವನೊಡನೆ ಹೇಳಿಬಿಟ್ಟಳು.

ಅನಂತರ ಇಬ್ಬರೂ ಕೂಡಿಯೇ ಅವಳ ತಂದೆ ತಾಯಿಯರ ಬಳಿಗೆ ಹೋದರು. ಎಲ್ಲವನ್ನೂ ತಿಳಿದ ಮೇಲೆ ತನ್ನ ಮಗಳಿಗೆ ಇವನೇ ತಕ್ಕ ವರನೆಂದು ಮಗಧರಾಜನು ನಿಶ್ಚಯಿಸಿಕೊಂಡನು. ಆ ರಾಜಪುತ್ರಿಯೊಂದಿಗೆ ಸಣ್ಣ ಕಳಿಂಗನಿಗೆ ಮದುವೆಯಾಯಿತು. ಮುಂದೆ ಬೇಗದಲ್ಲೇ ಈ ಹೊಸ ದಂಪತಿಗಳಿಗೆ ಒಬ್ಬ ಮಗನು ಹುಟ್ಟಿದನು, ಅನೇಕ ಶುಭ ಲಕ್ಷಣಗಳಿಂದ ಪ್ರಕಾಶಿಸುವ ಆ ಮಗುವಿಗೆ, ವಿಜಯಕಳಿಂಗನೆಂದು ನಾಮಕರಣ ಮಾಡಿದರು. ಅತ್ಯಂತ ಮುದ್ದಿನಿಂದ ಮಗುವನ್ನು ಬೆಳೆಸ ತೊಡಗಿದರು.

ವಿಜಯಕಳಿಂಗನು ದೊಡ್ಡವನಾಗುತ್ತಾ ಬರಲು, ಸಣ್ಣ ಕಳಿಂಗನು, ಕಳಿಂಗರಾಜರ ಜಾತಕಗಳ ಆಯುರ್ದಾಯದ ಲೆಕ್ಕವನ್ನು ನೋಡಿದನು. ತನ್ನ ಅಣ್ಣನಾದ ದೊಡ್ಡ ಕಳಿಂಗನು ಆಗಲೇ ಸಂತತಿಯಿಲ್ಲದೆ ಸತ್ತಿರುವನೆಂದು ಅದರಿಂದ ತಿಳಿಯಿತು.

ಇದೇ ಸರಿಯಾದ ಸಮಯವೆಂದು ಸಣ್ಣ ಕಳಿಂಗನು ಮಗನನ್ನು ಕರೆದು, "ಕುಮಾರಾ, ನೀನು ಜೀವಿತವನ್ನು ಕಳೆಯಬೇಕಾದುದು ಈ ಅರಣ್ಯದಲ್ಲಿ ಅಲ್ಲ. ನನ್ನ ಅಣ್ಣ ದೊಡ್ಡ ಕಳಿಂಗನು ದಾಂತಿಪುರದ ರಾಜ. ಆ ರಾಜ್ಯಕ್ಕೆ ತಕ್ಕ ವಾರಸನು ನೀನೇ. ಆದುದರಿಂದ ಕೂಡಲೇ ಹೋಗಿ, ಅರಾಜಕವಾಗಿರುವ ಆ ಸಿಂಹಾಸನವನ್ನು ಏರಿ ರಾಜ್ಯವಾಳು. ಮೊದಲು ಅಲ್ಲಿರುವ ವೃದ್ಧ ಮಂತ್ರಿಯನ್ನು ನೋಡು. ನಾನು ಕೊಡುವ ವಸ್ತುಗಳನ್ನು ಅವರಿಗೆ ತೋರಿಸಿದರೆ, ಸಾಕು." ಎಂದು ಎಲ್ಲಾ ರಹಸ್ಯವನ್ನೂ, ವೃದ್ಧಮಂತ್ರಿಯ ಸಮಾಚಾರವನ್ನೂ ಹೇಳಿ, ಗುರುತಿನ ವಸ್ತುಗಳನ್ನೂ ಕೊಟ್ಟು ಹರಸಿ ಕಳುಹಿಸಿದನು.

ತಂದೆ ತಾಯಿ, ಅಜ್ಜಾ ಅಜ್ಜಿಯರಿಂದ ಅನುಮತಿ ಪಡೆದು ವಿಜಯಕಳಿಂಗನು ದಾಂತಿಪುರಕ್ಕೆ ಹೋಗಿ ವೃದ್ಧಮಂತ್ರಿಯ ದರ್ಶನ ಮಾಡಿ, ಗುರುತುಗಳನ್ನು ಒಪ್ಪಿಸಿ, ತಾನು ಯಾರೆಂಬುದನ್ನು ನಿರೂಪಿಸಿದನು.

ಆಗ ನಿಜಕ್ಕೂ ದೊಡ್ಡ ಕಳಿಂಗನು ತೀರಿ ದಾಂತಿಪುರವು ಅರಾಜಕ ಸ್ಥಿತಿಯಲ್ಲಿ ಹೇಗೋ ಏನೋ ಎಂಬಂತೆ ನಡೆಯುತ್ತಿದ್ದಿತು.

ವೃದ್ಧ ಮಂತ್ರಿ ಮಹಾಸಭೆಯನ್ನು ಸೇರಿಸಿ, ಹುಡುಗನಾದ ವಿಜಯಕಳಿಂಗನ ಪೂರ್ವೋತ್ತರಗಳನ್ನು ತಿಳಿಸಿದಾಗ, ಸಭಿಕರೆಲ್ಲಾ ಸಂತೋಷಾಶ್ಚರ್ಯಗಳಿಂದ ಜಯಜಯವೆಂದು ಘೋಷಿಸಿದರು.

ವಿಜಯಕಳಿಂಗನಿಗೆ ಪಟ್ಟಾಭಿಷೇಕವಾಯಿತು.






# ಯುವರಾಜನ ಮೌನ

ಒಂದು ಕಾಲದಲ್ಲಿ ವಜ್ರಪುರದ ರಾಜನಾದ ವಜ್ರಕೇತು ಮಹಾರಾಜನಿಗೆ ಇಬ್ಬರು ಕುಮಾರರಿದ್ದರು, ಅವರಲ್ಲಿ ಹಿರಿಯ ಕುಮಾರನು ಚಿಕ್ಕತನದಲ್ಲಿ ಬಹಳ ಉತ್ಸಾಹದಿಂದ, ಎಲ್ಲರೊಂದಿಗೂ ನಗುನಗುತ್ತ ಮಾತಾಡಿಕೊಂಡಿದ್ದನು. ಆದರೆ ವಯಸ್ಸಾಗುತ್ತಾ ಬಂದಂತೆ ಕ್ರಮಕ್ರಮವಾಗಿ, ಅವನ ಮಾತುಗಳು ಕಡಿಮೆಯಾಗುತ್ತಾ, ಮಿತಿಮೀರಿದ ಶಾಂತಭಾವವೂ, ಮೌನವೂ ಸೇರಿಕೊಳ್ಳ ತೊಡಗಿತು. ಕಡೆಗೆ ಮಾತಾಡುವುದನ್ನು ಪೂರ್ತಿಯಾಗಿ ಬಿಟ್ಟನು. ಮುಂದೆ ರಾಜನಾಗಬೇಕಾದ ಹಿರಿಯ ಮಗನಿಗೇ ಹೀಗಾದುದನ್ನು ನೋಡಿ ಮಹಾರಾಜನಿಗೆ ಬಹು ದೊಡ್ಡ ಚಿಂತೆ ಹತ್ತಿಕೊಂಡಿತು.

ಒಂದು ದಿನ ವಜ್ರಕೇತು ರಾಜನು ಮಂತ್ರಿ ಮತ್ತು ರಾಜಗುರುಗಳೊಂದಿಗೆ ತನ್ನ ಹಿರಿಯ ಕುಮಾರನ ಮೌನಗುಣವನ್ನು ಹೋಗಲಾಡಿಸುವುದು ಹೇಗೆಂದು ಆಲೋಚನೆ ಮಾಡಿದನು. ಈವರೆಗೆ ರಾಜನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದುದರಿಂದ, ರಾಜಕುಮಾರನನ್ನು ಚೆನ್ನಾಗಿ ಮಾತಾಡಿಸಿದವರಿಗೆ ತಕ್ಕ ಬಹುಮಾನ ಕೊಡುವುದಾಗಿ ಪ್ರಕಟಿಸಿದರೆ ಹೇಗಿದ್ದೀತು ? ಎಂದು ರಾಜನು ಅವರನ್ನು ಕೇಳಿದನು. ಮಂತ್ರಿ ರಾಜಗುರುವನ್ನು ನೋಡಿದನು.

ರಾಜನ ಮಾತನ್ನು ಸಾವಧಾನ ಚಿತ್ತದಿಂದ ಕೇಳಿದ ರಾಜಗುರುಗಳು "ಮಹಾರಾಜಾ, ಯುವರಾಜನು ಸಾಧಾರಣ ವಿಷಯಗಳಲ್ಲಿ ಮಾತಾಡದೆ ನಿರ್ಲಕ್ಷ್ಯನಾಗಿರುವುದನ್ನು ನೋಡಿ ಇಷ್ಟೊಂದು ಚಿಂತೆ ಪಡಬೇಕಾಗಿಲ್ಲ. ಏಕೆಂದರ ಅವನು ಮೂಕನೇನೂ ಅಲ್ಲ. ತಪಸ್ಸು ಮಾಡುವ ಮೌನ ಮುದ್ರೆಯ ಮುನಿಯೂ ಅಲ್ಲ. ಬಹುಶಃ ಕೆಲವರಲ್ಲಿ ಅಪೂರ್ವವಾಗಿ ವಯಸ್ಸಿಗೆ ಮಿಂಚಿದ ಭಾವನೆಗಳಿರುವುದರಿಂದ ಇಂತಹ ಮೌನಗಂಭೀರ ಸ್ವಭಾವ ಬಂದು ಬಿಡುವುದುಂಟು. ಅದರ ಮೇಲೆ ಇಂತಹ ಕೆಲವು ಮಿತಭಾಷಿಗಳು ಕಾರಣಜನ್ಮದ ಮಹನೀಯರಾಗಿರುತ್ತಾರೆ. ಹಿಂದೆ ನಮ್ಮ ನೆರೆಯ ರಾಜ್ಯದ ನೀಲಾಪುರಿಯ ಯುವರಾಜನಾದ ರವಿಚಂದ್ರನನ್ನು ಮಾತಾಡಿಸಲು, ಅವನ ತಂದೆ ನಿಮ್ಮ ಹಾಗೆಯೇ ಮಾಡಿದ ಪ್ರಯತ್ನಗಳು ನಿಮಗೆ ತಿಳಿದಿರಲಿಕ್ಕಿಲ್ಲ" ಎಂದು ಆ ಸಮಾಚಾರವನ್ನು ಕೂಡಾ ಹೇಳಿದನು, ಅದೇನೆಂದರೆ,

ಆರ್. ಪ್ರಸಾದ್




ನೀಲಾಪುರದ ರಾಜದಂಪತಿಗಳಿಗೆ ಬಹಳ ಕಾಲ ಮಕ್ಕಳಿಲ್ಲದೆ, ಕಡೆಗೆ ಒಬ್ಬ ಮಗನು ಹುಟ್ಟಿದ್ದನು. ಅವರು ಆ ಮಗನಿಗೆ ರವಿಚಂದ್ರನೆಂದು ಹೆಸರಿಟ್ಟು, ಅತ್ಯಂತ ಮುದ್ದಿನಿಂದ ಬೆಳೆಸಿದರು.

ದೊಡ್ಡವನಾಗುತ್ತಾ ಬಂದ ಹಾಗೆ ರವಿಚಂದ್ರನಲ್ಲಿ ಅಂದಚೆಂದಗಳೂ, ಬುದ್ಧಿವಂತಿಕೆಗಳೂ ದಿನದಿಂದ ದಿನಕ್ಕೆ ಅಭಿವೃದ್ಧಿಯಾಗುತ್ತಾ ಬಂದವು. ಅವನ ಅಭ್ಯಾಸಗಳೂ, ಪ್ರವರ್ತನೆಗಳೂ ಹತ್ತು ಮಂದಿ ಮೆಚ್ಚಿಕೊಳ್ಳುವ ಹಾಗೇ ಇದ್ದುವು. ಆದರೆ ಹನ್ನೆರಡು ವರ್ಷ ತುಂಬಿದರೂ ಅವನ ಬಾಯಿಯಿಂದ ಒಂದು ಮಾತು ಕೂಡಾ ಬರಲಿಲ್ಲ. ಯಾವಾಗ ನೋಡಿದರೂ ಏನೋ ತೀವ್ರವಾಗಿ ಆಲೋಚಿಸುವವನಂತೆ ಕಾಣುವನು. ಆಗಾಗ ತನಗೆತಾನೇ ಸಣ್ಣಗೆ ನಗುವನು. ಇಷ್ಟಕ್ಕೂ ಅವನು ಮೂಕನಾದನೋ ಎಂದರೆ ಅದೇ ನಿಲ್ಲ. ಏಕೆಂದರೆ ಅವನು ಏಕಾಂತದಲ್ಲಿರುವಾಗ, ಅವನಿಗೆ ಮಾತ್ರ ಕೇಳಿಸುವ ಹಾಗೆ ಸಣ್ಣಗೆ ಹಾಡಿಕೊಳ್ಳುತ್ತಿರುವುದನ್ನು ಸೇವಕರು ಕೇಳಿ ರಾಜನಿಗೆ ತಿಳಿಸಿದ್ದರು. ಅದೊಂದು ಆಶಾತಂತು ಮಾತ್ರವೇ ಅನಿಸಿತ್ತು.

ಆ ರವಿಚಂದ್ರನ ಮೌನಪ್ರವರ್ತನೆ ರಾಜನಿಗೆ ಬಹಳ ಚಿಂತೆಯನ್ನುಂಟು ಮಾಡಿತು. ಯುವರಾಜನನ್ನು ಮಾತಾಡಿಸಿದವರಿಗೆ ಕೇಳಿದ ಬಹುಮಾನ ಕೊಡುವೆನೆಂದು ಎಲ್ಲೆಲ್ಲೂ ಡಂಗುರ ಸಾರಿಸಿದನು. ಆ ಡಂಗುರವನ್ನು ಕೇಳಿ ದೇಶದೇಶಗಳಿಂದ, ಅನೇಕ ಮಂದಿ ಬಂದು ಯುವರಾಜನನ್ನು ಮಾತಾಡಿಸಲು ಮೇಲಾಟ ತೋರಿಸುವಂತೆ ಏನೇನೋ ಮಾಡಿದರು. ಹೆಸರಾಂತ ದೊಡ್ಡ ದೊಡ್ಡ ವೈದ್ಯರು ಎಂತೆಂತಹುದೋ ಔಷಧ ಕೊಟ್ಟರು. ಮತ್ತೆ ಕೆಲವರು ಸುಪ್ರಸಿದ್ಧ ಪಂಡಿತರ ವಾದೋಪವಾದವನ್ನಿಡಿಸಿದರು. ತರ್ಕಶಾಸ್ತ್ರಗಳಿಂದ ತರ್ಕ ಮಾಡಿಸಿ ಯುವರಾಜನ ಬಾಯಿಯಿಂದ ಮಾತು ಬರಿಸಲು ಪ್ರಯತ್ನ ಮಾಡಿಸಿದರು. ಇನ್ನೂ ಕೆಲವರು ಮಂತ್ರಗಳಿಂದ ರವಿಚಂದ್ರನನ್ನು ಮಾತಾಡಿಸಲು ನೋಡಿದರು. ಕಡೆಗೆ ಹಾಸ್ಯಗಾರರು ಏನೇನೋ ವಿನೋದ ತೋರಿಸಿ ಹತಾಶರಾಗಿ ಹೋದರು. ಯಾರ ಯಾರ ಪ್ರಯತ್ನಗಳೊಂದೂ ಫಲಿಸಲಿಲ್ಲ.

ಒಂದು ದಿನ ಮಧ್ಯಾಹ್ನ ಭೋಜನವಾದ ಮೇಲೆ ರಾಜ ದಂಪತಿಗಳು ಅಂತಃಪುರದಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಯುವರಾಜನು ಉದ್ಯಾನವನದೊಳಗೆ ಹೋಗಿ ಒಂದು ಮರದ ನೆರಳಿನಲ್ಲಿ ಕುಳಿತುಕೊಂಡಿದ್ದನು. ಅವನೊಂದಿಗೆ ಬಂದ ಸೇವಕನು ಸ್ವಲ್ಪ ದೂರದಲ್ಲಿ ನಿಂತಿದ್ದನು.

ಸ್ವಲ್ಪ ಹೊತ್ತಿಗೆ ಒಂದು ಗಿಳಿ ಹಾರಿ ಬಂದು ಮರದ ಕೊಂಬೆಯ ಮೇಲೆ ಕುಳಿತು ಕೀಚು ಕೀಚೆಂದು ಕೂಗ ತೊಡಗಿತು. ಗಿಳಿ ಮಾಡುವ ಶಬ್ದದಿಂದ ಯುವರಾಜನಿಗೆ ಉಪದ್ರವವಾಗುವುದೆಂದು ತಿಳಿದು, ಸೇವಕನು ಆ ಗಿಳಿಯ ಮೇಲೆ ಗುರಿಯಿಟ್ಟು ಕಲ್ಲು ಬೀಸಿದನು. ಕೂಡಲೇ ಗಿಳಿಕಿಟ್ಟನೆ ಅರಚಿ ನೆಲಕ್ಕೆ ಬಿತ್ತು.

ಯುವರಾಜನು ತಟ್ಟನೆದ್ದು ಆ ಪಕ್ಷಿಯ ಬಳಿಗೆ ಹೋಗಿ ಅದನ್ನು ಕೈಯಲ್ಲೆತ್ತಿಕೊಂಡು ಮೃದುವಾಗಿ ತಡವುತ್ತ " ಏಕೆ ಅಳುವಿಯಮ್ಮಾ ? ಗಾಯವಾಯಿತೇ? ಸುಮ್ಮನಿರುತ್ತಿದ್ದರೆ ಈ ಕಷ್ಟ ಬರುತ್ತಿತ್ತೇ ? ನೀನು ಕೂಗಿದ್ದರಿಂದಲ್ಲವೇ ಗಾಯವಾಯಿತು ?" ಎಂದು ಪ್ರೇಮದಿಂದ ಅನುತಾಪ ತೋರಿಸಿದನು.

ಅದನ್ನು ನೋಡಿ ಆ ಸೇವಕನು ಅತ್ಯುತ್ಸಾಹದಿಂದ " ಯುವರಾಜರು ಮಾತಾಡಿದರು ! ಯುವರಾಜರು ಮಾತಾಡಿದರು !" ಎಂದು ಕೂಗುತ್ತಾ ಅಂತಃಪುರಕ್ಕೆ ಓಡಿದನು.

ವಿಷಯ ತಿಳಿದು ರಾಜನೂ, ರಾಣಿಯೂ ಅತ್ಯಂತ ಉತ್ಸಾಹದಿಂದ ಉದ್ಯಾನವನಕ್ಕೆ ಬಂದರು. ಅವರೊಂದಿಗೆ ರಾಜ ಪರಿವಾರವೂ ಉದ್ಯಾನವನವನ್ನು ಸೇರಿತು. ಅವರೆಲ್ಲಾ ಅಲ್ಲಿಗೆ ಬರುವಷ್ಟರಲ್ಲಿ ಗಿಳಿ ಸುಧಾರಿಸಿ ಹಾರಿಹೋಗಿತ್ತು. ಯುವರಾಜನು ಯಥಾ ಪ್ರಕಾರ ಮೌನವಾಗಿದ್ದನು. ರಾಜನಿಗೆ ಸೇವಕನ ಮೇಲೆ ಕೆಟ್ಟ ಕೋಪ ಬಂತು.

" ಸುಳ್ಳು ಹೇಳಿ ನಮ್ಮನ್ನೆಲ್ಲ ಮಂಗಾಡಿಸಿದ ಈ ನೀಚನನ್ನು ಗಲ್ಲಿಗೇರಿಸಿಬಿಡಿ !" ಎಂದು ಭಟರಿಗೆ ಆಜ್ಞಾಪಿಸಿದ ರಾಜನು.

" ನಾನು ಸುಳ್ಳಾಡಲಿಲ್ಲ, ಮಹಾಪ್ರಭೂ, ನಿಜವಾಗಿಯೇ ಯುವರಾಜರು ಮಾತಾಡುವುದನ್ನು ಕೇಳಿದೆನು " ಎಂದನು ಸೇವಕ.

ಭಟರು ರಾಜನ ಆಜ್ಞೆಯನ್ನು ನೆರವೇರಿಸಲು ಸೇವಕನನ್ನು ಬಂಧಿಸಲು ಮುಂದೆ ಬಂದರು

ಸೇವಕನು ಯುವರಾಜನ ಕಾಲಬುಡದಲ್ಲಿ ಬಿದ್ದು, " ಯುವರಾಜ ಪ್ರಭೂ ! ಯಾವ ತಪ್ಪೂ ಮಾಡದ ನನಗೆ ನಿಜ ಹೇಳಿದ್ದಕ್ಕೆ ಗಲ್ಲಿನ ಶಿಕ್ಷೆಯಾಗುವುದನ್ನು ನೋಡುತ್ತಾ ಸುಮ್ಮನಿರುವುದು ನ್ಯಾಯವೇ ? ಗಿಳಿಗೆ ಗಾಯವಾಗುವುದನ್ನು ನೋಡಿ ಕರಗಿದ ನಿಮ್ಮ ಹೃದಯವು ನಿರಪರಾಧಿಯಾದ ನನಗೆ ಮರಣದಂಡನೆ ವಿಧಿಸಿದರೂ ಮೌ ನ ವಾ ಗಿ ರು ವಿ ರಾ ? ಇದು ಧರ್ಮವೇ ? ಒಂದು ಸಾರಿ ಮಾತಾಡಿ ನನ್ನನ್ನು ಕಾಪಾಡಿರಿ ಪ್ರಭೂ !" ಎಂದು ಅಳುತ್ತಾ ಬೇಡಿದನು



ಯುವರಾಜನು ಅವನನ್ನು ಹಿಡಿದೆಬ್ಬಿಸಿ "ಮಾತಾಡಿದುದರಿಂದ ತಾನೇ ನಿನಗೆ ಈ ಕಷ್ಟ ಬಂತು ? ಮೌನವಾಗಿರುತ್ತಿದ್ದರೆ ಯಾವ ಕಷ್ಟವೂ ಬರುತ್ತಿದ್ದಿಲ್ಲವೆಂದು ಈಗ ತಿಳಿಯಿತೇ ?" ಎಂದನು.

ಯುವರಾಜನು ಮಾತಾಡುವುದನ್ನು ಕೇಳಿದ ಕೂಡಲೇ ಸೇವಕನ ಗಲ್ಲಿನ ಶಿಕ್ಷೆ ರದ್ದಾಯಿತು. ಮಾತ್ರವಲ್ಲ, ರಾಜನು ತನ್ನ ಕೊರಳಲ್ಲಿದ್ದ ಹಾರವನ್ನು ತೆಗೆದು ಆ ಸೇವಕನಿಗೆ ಬಹುಮಾನ ಕೊಟ್ಟನು. ಆದರೆ ಆ ದಿನ ರಾತ್ರಿ ರವಿಚಂದ್ರನು ರಾಜ ಜೀವನವನ್ನೆಲ್ಲಾ ಬಿಟ್ಟು, ಅರಮನೆಯನ್ನು ಬಿಟ್ಟು, ಸನ್ಯಾಸ ತೆಗೆದುಕೊಂಡು, ದೇಶದಿಂದಲೇ ಹೊರಟು ಹೋದನು.

ಈ ಸಮಾಚಾರವನ್ನು ಕೇಳಿದ ಮೇಲೆ ರಾಜನೂ ಹೆದರಿದನು. ರಾಜಗುರುಗಳು ರಾಜನನ್ನು ಸಮಾಧಾನಪಡಿಸಿ, ಆ ಹಿರಿಯ ಕುಮಾರನನ್ನು ತನ್ನ ಜತೆಯಲ್ಲಿ ಕರೆದುಕೊಂಡು ಹೋದರು. ಎಂಟು ದಿನಗಳ ಮೇಲೆ ಅವನನ್ನು ಕರೆದುಕೊಂಡು ರಾಜನ ಬಳಿಗೆ ಹಿಂದಿರುಗಿ ಬಂದರು. ಯುವರಾಜನು ತಂದೆಯನ್ನು ನೋಡಿದ ಕೂಡಲೇ ನಮಸ್ಕಾರ ಮಾಡಿ, "ಅಪ್ಪಾ, ನೀವು ನಮ್ಮ ಗುರುಕುಲವನ್ನು ಎಂದಾದರೂ ನೋಡಿದ್ದೀರೇನು ? ಅಲ್ಲಿ ನನಗೆ ಎಷ್ಟು ಮಂದಿ ಸ್ನೇಹಿತರಿದ್ದಾರೆ ಗೊತ್ತೇ ? ಬಹಳ ಚೆನ್ನಾಗಿದೆ. ಕೆಲವು ದಿನ ಅಲ್ಲೇ ಇದ್ದು ಕಲಿಯುತ್ತೇನೆ." ಎಂದನು.

ತನ್ನ ಮಗನು ಹೀಗೆ ಉತ್ಸಾಹದಿಂದ ಮಾತಾಡುವುದನ್ನು ಕೇಳಿ ರಾಜನು ಸಂತೋಷದಿಂದ ಉಕ್ಕಿದನು. ಅವನು ರಾಜ ಗುರುಗಳನ್ನು ಆಚೆಗೆ ಕರೆದುಕೊಂಡು ಹೋಗಿ, "ಬಹಳ ಆಶ್ಚರ್ಯವಾಗಿದೆ. ಒಂದು ವಾರದೊಳಗೇ ನಮ್ಮ ಯುವರಾಜನ ಪ್ರವರ್ತನೆಯಲ್ಲಿ ಇಷ್ಟು ದೊಡ್ಡ ವ್ಯತ್ಯಾಸವು ಬರುವಂತೆ ಏನು ಮಾಡಿದಿರಿ ?" ಎಂದು ಕೇಳಿದನು.

"ಮಹಾರಾಜರೇ, ಇದರಲ್ಲಿ ಆಶ್ಚರ್ಯಪಡುವಂತಹುದಿಲ್ಲ. ನೀವು ಮಗನನ್ನು ಅಪರಿಮಿತ ಕೊಂಡಾಟ ಮಾಡಿ ಬೆಳೆಸಿದಿರೇ ಹೊರತು, ಆ ವಯಸ್ಸಿನವರಿಗೆ ಇರಬೇಕಾದ ಗೆಳೆಯರನ್ನು ಹೊಂದಿಸಲಾರದೆ ಹೋದಿರಿ. ತಂದೆ ತಾಯಿಗಳೊಂದಿಗೆ, ವಯಸ್ಸಿನಲ್ಲಿ ಬಹಳ ದೊಡ್ಡವರಾಗಿರುವ ಸೇವಕರೊಂದಿಗೆ ಯುವರಾಜನು ತನಗೆ ಇಷ್ಟವಾದುದನ್ನು ಕುರಿತು ಮಾತನಾಡಲು ಸಾಧ್ಯವಿಲ್ಲವಷ್ಟೇ ? ಈಗ ನನ್ನ ಗುರುಕುಲದಲ್ಲಿ ಅವನ ವಯಸ್ಸಿನವರೇ ಆದ ಅನೇಕರು ಜತೆಗಾರರೊಂದಿಗೆ ಪಳಗಿ ತಾನು ಏಕಾಂಗಿ ಎಂಬ ಭಾವನೆ ಅವನನ್ನು ಬಿಟ್ಟು ಹೋಯಿತು. ಹೊಸ ಉತ್ಸಾಹ ಕೂಡಿತು. ಆದರೊಂದಿಗೇ ಮೌನ ಲಕ್ಷಣವೂ ತನ್ನಂತೆ ಮಾಯವಾಯಿತು" ಎಂದರು ರಾಜಗುರುಗಳು.

ರಾಜನು ರಾಜಗುರುಗಳನ್ನು ಬಹಳವಾಗಿ ಗೌರವಿಸಿ ಅನರ್ಘ್ಯವಾದ ಬಹುಮಾನಗಳನ್ನು ಕೂಡ ಕೊಟ್ಟನು.





# ಆಟವಾಟಗಳ ಪಿಶಾಚಿಗಳು

ಒಂದು ಊರಿನಲ್ಲಿ ಚಿದಂಬರನೆಂಬವನಿಗೆ ಕಣ್ಣುಗಳಲ್ಲಿ ಹೂ ಬಂದು ಕುರುಡಾಗಿ ಹೋಯಿತು. ಅದೇ ಊರಿನಲ್ಲಿ ನಿತ್ಯಾನಂದನೆಂಬವನಿಗೆ ಬ್ರಹ್ಮ ಕಿವುಡಾಗಿತ್ತು, ಇಬ್ಬರೂ ಮದುವೆ ಮಾಡಿಕೊಂಡು, ಬೀದಿ ಬೀದಿ ತಿರುಗಿ ಬೇಡುತ್ತಾ ತಮ್ಮ ತಮ್ಮ ಹೆಂಡಂದಿರನ್ನು ಪೋಷಿಸಿಕೊಂಡಿದ್ದರು, ಇಬ್ಬರೂ ಪರಸ್ಪರ ಸ್ನೇಹಿತರಾಗಿಯೇ ವೃತ್ತಿ ನಡೆಸುತ್ತಿದ್ದರು.

ಅವರ ಊರಿಗೆ ಹತ್ತು ಕ್ರೋಶಗಳಷ್ಟು ದೂರದಲ್ಲಿ ಗುಡ್ಡದ ಮೇಲೆ ರಂಗನಾಯಕೀ ದೇವಿಯ ಗುಡಿ ಇದ್ದಿತು. ಅಲ್ಲಿ ಪ್ರತಿ ವರ್ಷ ದೊಡ್ಡ ರೀತಿಯಲ್ಲಿ ಉತ್ಸವ ನಡೆಯುತ್ತದೆ. ಅಲ್ಲಿಗೆ ಹೋಗುವ ಮಧ್ಯ ದಾರಿಯಲ್ಲಿ ಚಿಕ್ಕದೊಂದು ಅಡವಿಯೂ ಇದೆ. ಚಿದಂಬರನೂ ನಿತ್ಯಾನಂದನೂ ಉತ್ಸವ ಕಾಲದಲ್ಲಿ ಆ ಅಡವಿಯನ್ನು ದಾಟಿ ಗುಡ್ಡದ ಗುಡಿಯ ಹತ್ತಿರ ನಾಲ್ಕು ದಿವಗಳ ವರೆಗೆ ಇರುತ್ತಾರೆ. ಗುಡಿಯ ಮೆಟ್ಟಿಲಿನ ಹತ್ತಿರ ಇಬ್ಬರೂ ಇದಿರು ಬದಿರಾಗಿ ಬಟ್ಟೆ ಹರಡಿ ಕುಳಿತರೆ, ಸಾಯಂಲದ ಹೊತ್ತಿಗೆ ಒಂದು ಮುಷ್ಟಿ ರೂಪಾಯಿಗಳನ್ನು ಗಂಟು ಕಟ್ಟಿಕೊಳ್ಳಬಹುದು.

ಆ ವರ್ಷ ಕೂಡಾ ಅವರಿಬ್ಬರೂ ಉತ್ಸವಕ್ಕೆ ಹೋಗಿ ತಲಾ ನೂರು ನೂರು ಸಂಪಾದಿಸಿಕೊಂಡು ಊರಿಗೆ ಹಿಂದಿರುಗಿ ಪ್ರಯಾಣ ಹೂರಟರು. ಆದರೆ ಅವರು •ಹೊರಡುವಾಗಲೇ ತಡವಾದುದರಿಂದ, ದಾರಿಯಲ್ಲಿ ಕತ್ತಲೆಯಾಯಿತು. ಕಾಡಿನಲ್ಲಿ ದಾರಿ ಕಂಡುಕೊಳ್ಳಲು ಕಷ್ಟವಾಗಿ. ಅವರ ಪ್ರಯಾಣವು ಸುಗಮವಾಗಿ ಸಾಗಲಿಲ್ಲ,

“ಎಲೋ, ಚಿದಂಬರಂ! ನಾವು ಸ್ವಲ್ಪ ಬೇಗನೇ ಹೊರಡಬೇಕಿತ್ತು. ನಿನಗೆ ಕತ್ತಲೆಯೂ ಬೆಳಕೂ ಒಂದೇ ಅನ್ನು. ಅರ್ಧರಾತ್ರಿಯ ಮೇಲೆ ಹಾವು ಹರಣೆಗಳು ಹರಿದಾಡುತ್ತವಪ್ಪಾ. ಅಂಥ ಶಬ್ದಗಳೋ ಕ್ರೂರಮೃಗಗಳ ಕೂಗೋ ಕೇಳಿದರೆ ನನಗೆ ಎಚ್ಚರಿಕೆ ಕೊಡು. ಸ್ವಲ್ಪ ಬೇಗ ಬೇಗ ಕಾಲು ಹಾಕು” ಎಂದನು ನಿತ್ಯಾನಂದ. ಸುತ್ತಲೂ ಇರುವ ಕತ್ತಲೆಯನ್ನು ಭೀತಿಯಿಂದ ನೋಡುತ್ತ.

ಚಿದಂಬರನು ಹೌದೆಂಬಂತೆ ತಲೆಯಾಡಿಸಿ ನಿತ್ಯಾನಂದನ ಕೈ ಹಿಡಿದುಕೊಂಡನು, ಇಬ್ಬರೂ ಬೇಗ ಬೇಗ ನಡೆಯ ತೊಡಗಿದರು. ಇದ್ದಕ್ಕಿದ್ದ ಹಾಗೆ ಎಂಥದೋ ಕೋಲಾಹಲ ಶಬ್ದ ಹೊರಡ ತೊಡಗಿತು.

ಎಂ. ಕೆ. ಈಶ್ವರರಾವ್



ಅದನ್ನು ಕೇಳಿ ಕುರುಡು ಚಿದಂಬರನು ನಿತ್ಯಾನಂದನ ಕೈಯನ್ನು ಗಟ್ಟಿಯಾಗಿ ಹಿಡಿದು ನಿಂತು, "ನಿಲ್ಲಪ್ಪಾ, ಮುಂದಿನಿಂದ ಎಲ್ಲಿಯೋ ಎಂಥದೋ ಕೂಗು ಕೇಳುತ್ತಾ ಇದೆ. ಅದೆಂತಹ ಶಬ್ದವಪ್ಪಾ?" ಎಂದನು.

ನಿತ್ಯಾನಂದನಿಗೆ ಶಬ್ದವೇನೂ ಕೇಳದಿದ್ದರೂ, ಆ ಶಬ್ದ ಹೊರಡಿಸುವ ಪಿಶಾಚಿಗಳನ್ನು ನೋಡಿ ಗಡಗಡನೆ ನಡುಗ ತೊಡಗಿದನು. ಗಂಡು ಪಿಶಾಚಿಯೊಂದು ಭೀಕರ ಸ್ವರದಿಂದ ಹಾಡುತ್ತಿದ್ದಿತು. ಒಂದು ಹೆಣ್ಣು ಪಿಶಾಚಿ ಆ ಹಾಡಿಗೆ ತಕ್ಕಂತೆ ಅಡಿ ಮೇಲಡಿ ಹಾಕುತ್ತ ಅಡವಿಯೇ ದದ್ದರಿಸುವಂತೆ ಕುಣಿಯುತ್ತಿದ್ದಿತು. ಕಣ್ಣಿಗೆ ಕಾಣುವುದನ್ನು ನಿತ್ಯಾನಂದನು ಹೇಳಲು, ಚಿದಂಬರನೂ ಹೆದರಿ ನಡುಗುತ್ತ, "ನಾವು ಹೆದರಬಾರದೋಯ್ ! ಹೊಗಳಿಕೆಗೆ ಉಬ್ಬಿ ಹೋಗದ ಪ್ರಾಣಿ ಯಾವುದೂ ಇಲ್ಲ. ಪಿಶಾಚಿಗಳಾದರೂ ಅಷ್ಟೇ ! ಅವುಗಳನ್ನು ಬಾಯಿ ತುಂಬಾ ಹೊಗಳೋಣ. ಧೈರ್ಯವಾಗಿರೋಣ" ಎಂದನು.

ತರುವಾಯ ಚಿದಂಬರನು ಧೈರ್ಯ ತಂದುಕೊಂಡು, ಗಟ್ಟಿಯಾಗಿ ಚಪ್ಪಾಳೆ ತಟ್ಟಿ, "ಅಹಾಹಾ ! ಅದ್ಭುತವಾದ ಹಾಡು ! ಸೀಯಾಳದಲ್ಲಿ ಕಲ್ಲು ಸಕ್ಕರೆ ಕಲಸಿ ಕುಡಿಯುವ ಹಾಗಿದೆ" ಎಂದು ಕೂಗಿ ಹೇಳಿದನು. "ನನಗೇನೋ ಜೇನು ಸೇರಿಸಿ ಸಾರಾಯಿ ಕುಡಿದ ಹಾಗಿದೆ ಆ ಕುಣಿತ!" ಎಂದನು ನಿತ್ಯಾನಂದ. ಆ ಹೊಗಳಿಕೆಗೆ ಗಂಡು ಪಿಶಾಚಿ ಸಂತೋಷದಿಂದ ಉಬ್ಬಿಹೋಯಿತು.

ನಿತ್ಯಾನಂದನು ಅಷ್ಟಕ್ಕೆ ಸುಮ್ಮನಾಗದೆ ಚಪ್ಪಾಳೆ ತಟ್ಟಿ, "ಓಹ್! ಅಮೋಘವಾದ ನಾಟ್ಯ ! ನವಿಲಿಗೆ ಕೂಡಾ ಹೀಗೆ ಕಲಿತುಕೊಳ್ಳಲು ಸಾಧ್ಯವಾಗದು" ಎಂದು ಅರಚಿದನು.

ಅದನ್ನು ಕೇಳಿ ಹೆಣ್ಣು ಪಿಶಾಚಿಗೆ ಅತ್ಯಾನಂದವಾಯಿತು. ಆದರೆ ತನ್ನ ಹಾಡನ್ನು ನಿತ್ಯಾನಂದನು ಮೆಚ್ಚಿಕೊಳ್ಳಲಿಲ್ಲವೆಂದು ಗಂಡು ಪಿಶಾಚಿಗೆ ಕೋಪ ಬಂತು. ತನ್ನ ಆಟವನ್ನು ಚಿದಂಬರನು ಮೆಚ್ಚಲಿಲ್ಲವೆಂದು ಹೆಣ್ಣು ಪಿಶಾಚಿಗೂ ಕೋಪ ಬಂತು.

"ಇವನ ಹಾಡಿನ ಹೊರತು ನನ್ನ ಕುಣಿತ ನಿನಗೆ ಚೆನ್ನಾಗಿಲ್ಲವೇನು ?" ಎಂದು ಚಿದಂಬರನನ್ನು ಕೇಳಿತು ಹೆಣ್ಣು ಪಿಶಾಚಿ.

"ನಿನ್ನ ಕುಣಿತ ನೋಡುವ ಅದೃಷ್ಟವಿಲ್ಲದ ಕುರುಡ ನಾನು ! ಇವನು ನಿನ್ನ ಕುಣಿತ ಹೊಗಳಿದ್ದು ಕೇಳುವಾಗ, ಇಂಥಾ ಕುಣಿತ ನೋಡುವ ಭಾಗ್ಯವಿಲ್ಲದ ನಾನು ಈ ಕ್ಷಣದಲ್ಲೇ ಸತ್ತು ಬಿಡುವಾ ಅಂತಲೇ ಇದ್ದೇನೆ !" ಎಂದನು ಚಿದಂಬರ.

ಗಂಡು ಪಿಶಾಚಿ ನಿತ್ಯಾನಂದನನ್ನು ನೋಡಿ, "ಇವಳ ಕುಣಿತದ ಆಟ ಹೊರತು ನನ್ನ ಹಾಡು ನಿನಗೆ ಹಿಡಿಸಲಿಲ್ಲವೋ ?" ಎಂದು ಕೇಳಿತು.

ಕಿವುಡನಾದ ನಿತ್ಯಾನಂದನಿಗೆ ಗಂಡು ಪಿಶಾಚಿ ತನ್ನನ್ನು ನೋಡಿ ಏನು ಹೇಳಿತೆಂದು ಕೇಳಿಸಲಿಲ್ಲ, ಅದಕ್ಕೆ ಚಿದಂಬರನೇ ಉತ್ತರ ಕೊಟ್ಟನು : "ಕೇಳಿದರೆ

ತಾನೇ ಹೊಗಳುವುದು ? ಈ ಬ್ರಹ್ಮ ಕಿವುಡನಿಗೆ ಹಾಡಿನ ಆನಂದ ಪರಮಾನಂದವೆಲ್ಲ ಹೇಗೆ ಗೊತ್ತಾದೀತು? ಅದಕ್ಕೇ ನಿತ್ಯಾನಂದನಾಗಿದ್ದಾನೆ".

ಈ ಉತ್ತರಗಳಿಂದ ಅವರಲ್ಲಿ ಒಬ್ಬನು ಕುರುಡನೆಂದೂ, ಇನ್ನೊಬ್ಬನು ಕಿವುಡನೆಂದೂ ಆ ಪಿಶಾಚಿಗಳಿಗೆ ಗೊತ್ತಾಯಿತು.

ಕೂಡಲೇ ಹೆಣ್ಣು ಪಿಶಾಚಿ ಚಿದಂಬರನ ಕಣ್ಣುಗಳಿಗೆ ಜಿಲ್ಲೆಂಬ ಹಿಮಗಾಳಿ ಊದಿತು. ಅದೇ ಸಮಯದಲ್ಲಿ ಗಂಡು ಪಿಶಾಚಿ ನಿತ್ಯಾನಂದನ ಕಿವಿಗಳಿಗೆ ಚಂಡೆ ಒಡೆದು ಹೋಗುವ ಹಾಗೆ ದೆವ್ವದ ಕೂಗೊಂದನ್ನು ಮೊಳಗಿಸಿತು.

ನೋಡುತ್ತಿದ್ದ ಹಾಗೆಯೇ ಚಿದಂಬರನಿಗೆ ಕಣ್ಣುಗಳು ಕಾಣ ತೊಡಗಿದುವು. ನಿತ್ಯಾನಂದನಿಗೆ ಕಿವಿಗಳು ಕೇಳ ತೊಡಗಿದುವು. ಮತ್ತೆ ಗಂಡು ಪಿಶಾಚಿ ಹಾಡ ತೊಡಗಿತು. ಹೆಣ್ಣು ಪಿಶಾಚಿ ಕುಣಿ ಕುಣಿದು ಆಡ ತೊಡಗಿತು. ಎದೆನಡಗಿಸುವಂತಹ ಅವುಗಳ ಆಟಪಾಟಗಳನ್ನು ನೋಡಿ, "ಆಹಾ ! ಹಾಹಾ !" ಎಂದು ಮೆಚ್ಚಿ ಕೂಗುತ್ತ, ಕುಣಿಯುತ್ತ ಅವುಗಳ ನಡುನಿಂದ ದಾಟಿಕೊಂಡು ಮೆಲ್ಲಮೆಲ್ಲನೆ, ಚಿದಂಬರ ನಿತ್ಯಾನಂದರು ಊರ ದಾರಿ ಹಿಡಿದರು.

ಅವರು ಊರು ಸೇರುವಾಗ ಬೆಳಗಾಗಿ ಹೋಯಿತು. ಅವರ ಮನೆಗಳು ಅಕ್ಕಪಕ್ಕದ ಬೀದಿಗಳಲ್ಲೇ ಇದ್ದುವು. ಚಿದಂಬರನು ಕಣ್ಣುಗಳನ್ನು ಮುಚ್ಚಿಕೊಂಡು ನಡೆದರೆ ಹೊರತು, ತನ್ನ ಬೀದಿಯನ್ನೂ ಮನೆಯನ್ನೂ ಗುರುತಿಸಲಾರದೆ ಹೋದನು. ಆ ರೀತಿಯಾಗಿ ನಡೆದು ಅವನು ತನ್ನ ಮನೆಯನ್ನು ಕಂಡುಕೊಂಡು ಬಾಗಿಲು ತಟ್ಟಲು, ಒಳಗಿನಿಂದ ಕುರೂಪಿಯಾಗಿದ್ದವಳೊಬ್ಬಳು ಬಂದು ಬಾಗಿಲು ತೆರೆದಳು. ಚಿದಂಬರನು ಅವಳನ್ನು ಅಸಹ್ಯದಿಂದ ನೋಡುತ್ತ, "ಓ! ಮನೆ ತಪ್ಪಿದ ಹಾಗಿದೆ! ಚಿಂತಾಮಣಿ ಎಂಬವಳ ಮನೆಯೆಲ್ಲಿದೆ ?" ಎಂದು ಕೇಳುತ್ತ, ತಾನು ಯಾವುದೋ ಬೇರೆ ಮನೆಗೆ ಬಂದು ತಪ್ಪು ಮಾಡಿದೆನೆಂದು ತಿರುಗಲು ಹವಣಿಸಿದನು. ಅವನ ಹೆಂಡತಿಯ ಹೆಸರೇ ಚಿಂತಾಮಣಿ, ಬಾಗಿಲು ತೆರೆದವಳು ಅವಳೇ !





ಬಂದೇ" ಎಂದು ಗರ್ಗರಿಸುವ ಗಂಡು ಕಂಠಸ್ವರವು ಅವನ ಕಿವಿಗೆ ಬಿದ್ದು ಅದುರಿಬಿದ್ದನು.

ಅವಳು ಬಾಗಿಲು ತೆರೆದಕೂಡಲೆ, "ಯಾರೋ ಗಂಡಸಿನ ಸ್ವರ ಕೇಳಿತಲ್ಲಾ? ಯಾರಿದ್ದಾರೆ ಒಳಗೆ?" ಎಂದು ಕೇಳಿದನು ನಿತ್ಯಾನಂದ.

ಗಂಡನಿಗೆ ಕಿವುಡು ಹೋಗಿ ಮಾತು ಕೇಳಿಸುವುದನ್ನು ನೋಡಿ, ಅವನ ಹೆಂಡತಿ ಕಾಂತಿ ಸಂತೋಷದಿಂದ ನಲಿಯುತ್ತ, "ದೇವರ ದಯದಿಂದ ನಿಮ್ಮ ಕಿವುಡು ಹೋಯಿತು! ನಮ್ಮ ಪುಣ್ಯ! ನನ್ನ ಕಂಠಸ್ವರ ಇರುವುದೇ ಹಾಗೆ! ಅದು ದೇವರೇ ಮಾಡಿದ್ದು. ಬನ್ನಿ!" ಎಂದಳು.

ಆ ಕಂಠಸ್ವರವನ್ನು ತಾಳಿಕೊಳ್ಳಲಾಗದ ನಿತ್ಯಾನಂದನು "ಹಾಗೇನು! ಇದನ್ನು ಯಾವಾಗಲೂ ಕೇಳುತ್ತಾ ಇದ್ದರೆ ನನಗೆ ಮತ್ತೆ ಕಿವುಡೇ ಬರುತ್ತೆ. ಇನ್ನು ನನ್ನ ಮುಂದೆ ತುಟಿ ತೆರೆಯಬೇಡ! ಜಾಗ್ರತೆ! ನಿನ್ನನ್ನು ಮಾಡಿಕೊಂಡ ಕರ್ಮಕ್ಕೆ ನೀನು ಮೂಕಿಯಾಗಿದ್ದರೆ ಮಾತ್ರ ಈ ಮನೆಯಲ್ಲಿರಬಹುದು" ಎಂದನು.

ಅದನ ಹೆಂಡತಿ ಉಕ್ಕಿಬರುವ ದುಃಖವನ್ನೂ ಕಣ್ಣೀರನ್ನೂ ಹತ್ತಿಕ್ಕಿಕೊಂಡು ಒಳಗೆ ಹೋದಳು.

ಆ ದಿನ ರಾತ್ರಿ ಯಾಕೋ ಕಾಡಿಗೆ ಹೋಗುತ್ತಿದ್ದ ನಿತ್ಯಾನಂದನಿಗೆ, ದಾರಿಯಲ್ಲಿ ಚಿದಂಬರನೂ ಸಿಕ್ಕಿದನು. ಇಬ್ಬರೂ ಹೆಂಡಂದಿರ ವಿಷಯವಾಗಿ ಬಂದ ಹೊರೆಯಂಥ ಕಷ್ಟವನ್ನು ಒಬ್ಬರೊಡನೆ ಒಬ್ಬರು ಹೇಳಿಕೊಂಡು, ಆ ಪಿಶಾಚಿಗಳೇ ತಮ್ಮ ಕಷ್ಟವನ್ನು ಪರಿಹಾರ ಮಾಡಬೇಕು ಎಂದುಕೊಂಡು ಹಾಗೆ ಕಾಡಿಗೆ ಹೊರಟು ಒಂದು ಸೇರಿಕೊಂಡಿದ್ದರು.

ಅವರು ಹೋದಾಗ ಈ ಸಾರಿ ಹೆಣ್ಣು ಪಿಶಾಚಿ ಹಾಡಿಕೊಂಡಿದ್ದಿತು. ಗಂಡು ಪಿಶಾಚಿ ಕುಣಿದಾಡಿಕೊಂಡಿದ್ದಿತು. ಅವರನ್ನು ನೋಡಿದ ಕೂಡಲೇ ಅವು ಆಟಪಾಟಗಳನ್ನು ನಿಲ್ಲಿಸಿ, "ಓ! ಮತ್ತೆ ಬಂದಿರೇಕೆ? ಏನು ಸಮಾಚಾರ? ನಮ್ಮ ಹಾಡು ಕುಣಿತ

ಗಂಡನಿಗೆ ದೃಷ್ಟಿ ಬಂದುದನ್ನು ನೋಡಿ ಅವಳಿಗೆ ಬಹಳ ಸಂತೋಷವಾಗಿ, "ಅದೆಂಥ ಮಾತು? ನಾನೇ ಚಿಂತಾಮಣಿ! ನಮ್ಮ ಮನೆಗೇ ನೀವು ಬಂದಿದ್ದೀರಿ. ನಿಮಗೆ ಕಣ್ಣು ಬಂದ ಸಂತೋಷದಲ್ಲಿ ನಿಮಗೂ ಬಾಯಿ ತಪ್ಪುತ್ತೆ! ನನಗೂ ಮಾತೇ ಬರೋದಿಲ್ಲ!" ಎಂದಳು.

ಆ ಕುರೂಪಿ ತನ್ನ ಹೆಂಡತಿ ಎಂದು ನೆನೆಯಲಾಗದೆ ಹೋದನು ಚಿದಂಬರ. ಆದರೆ ಕಂಠಸ್ವರದಿಂದ ಅವಳೇ ತನ್ನ ಹೆಂಡತಿ ಎಂದು ಗೊತ್ತಾಯಿತು. ಇಷ್ಟು ಕಾಲ ಈ ವಿಕಾರ ಮುಖದವಳೊಂದಿಗೆ ತಾನು ಸಂಸಾರ ನಡಸಿದೆನೆಂದು ತಿಳಿದು ಕಂಪಿಸಿದನು. ಆದರೆ ಚಿಂತಾಮಣಿ ಗಂಡನ ಕಸಿವಿಸಿಯನ್ನು ಊಹಿಸಿಕೊಳ್ಳದೆ, ಈ ಶುಭವಾರ್ತೆಯನ್ನು ನೆರೆ ಹೊರೆಯವರಿಗೆ ತಿಳಿಸಲು ಓಡಿದಳು.

ಅಲ್ಲಿ ನಿತ್ಯಾನಂದನು ತನ್ನ ಮನೆಯನ್ನು ಸೇರಿ ಒಂದೆರಡು ಸಾರಿ ಬಾಗಿಲು ತಟ್ಟಲು, "ಬಂದೇ

ನೋಡಬೇಕು ಅಂತಬಂದಿರಾ?" ಎಂದು ಕೇಳಿದುವು. "ನನ್ನ ಹೆಂಡತಿ ಕೆಟ್ಟ ಕುರೂಪಿ. ಅವಳೊಂದಿಗಿರಲು ಸಾಧ್ಯವಾಗುವುದಿಲ್ಲ. ನನಗೆ ದೃಷ್ಟಿ ಬರುವ ಹಾಗೆ ಮಾಡಿ ನೀವೇ ಈ ಕಷ್ಟಕ್ಕೆ ಕಾರಣರಾದಿರಿ. ಆದ್ದರಿಂದ ಈ ತೊಂದರೆಯನ್ನು ಕೂಡಾ ನೀವೇ ಪರಿಹಾರ ಮಾಡಬೇಕು " ಎಂದನು ಚಿದಂಬರ.

" ಹಾಗೆಯೇ ನನಗೂ ಆಗಿದೆ. ಗಂಡುಸಿನ ಸ್ವರದ ಹೆಣ್ಣು ಕೆಟ್ಟ ಕೆಟ್ಟ ಅನಿಷ್ಟಗಳಿಗೆ ಕಾರಣಳಾಗುತ್ತಾಳೆ. ಅವಳ ಕಂಠಸ್ವರ ತಾಳಲಾರೆನು. ಅದಕ್ಕೂ ನೀವೇ ಕಾರಣರಾದುದರಿಂದ ಏನಾದರೂ ದಾರಿ ನೀವೇ ತೋರಿಸಬೇಕು " ಎಂದನು ನಿತ್ಯಾನಂದ.

ಇದನ್ನು ಕೇಳಿ ಪಿಶಾಚಿಗಳು ಬೆಪ್ಪಾಗಿ ಮುಖ ಮುಖ ನೋಡಿಕೊಂಡು, " ಇಷ್ಟು ದಿನ ಅವರು ನಿಮ್ಮನ್ನು ಪ್ರೇಮದಿಂದ ನೋಡಿಕೊಂಡಿದ್ದವರು ತಾನೇ ?" ಎಂದು ಕೇಳಿದುವು.

" ಹೌದು. ಈಗಲೂ ಹಾಗೆಯೇ ನೋಡಿ ಕೊಳ್ಳುತ್ತಾರೆ. ಒಟ್ಟಿನ ಮೇಲೆ ಅವರ ರೂಪವೂ ಕಂಠಸ್ವರವೂ ಸಹಿಸಲಾಗದಂತಾಗಿದೆ " ಎಂದರು ಚಿದಂಬರ ನಿತ್ಯಾನಂದರು.

" ಇಷ್ಟರ ವರೆಗೂ ನಿಮಗೆ ಇದ್ದ ಲೋಪಗಳನ್ನು ಅವರು ಸಂತೋಷದಿಂದ ಸಹಿಸಿಕೊಂಡು ಏನೂ ಬೇಸರಪಡದೆ ಬಹಳ ಆದರದಿಂದ ನಿಮ್ಮನ್ನು ನೋಡಿದ್ದಾರೆ. ಈಗಲೂ ನೋಡುತ್ತಾರೆ. ನಿಮ್ಮ ಲೋಪಗಳು ಹೋದುದಕ್ಕೆ ಸಂತೋಷತೋರಿಸಿದ್ದಾರೆ. ಅವರ ಮನಸ್ಸು ಎಷ್ಟು ಒಳ್ಳೆಯದೆಂಬುದನ್ನು ಈಗ ಸ್ವಲ್ಪ ಆಲೋಚನೆ ಮಾಡಿ ನೋಡಿರಿ " ಎಂದಿತು ಗಂಡು ಪಿಶಾಚಿ.

ಆ ಮಾತು ನಿಜವೇ ಆದುದರಿಂದ, ಇಬ್ಬರ ಬಾಯಿಯಿಂದಲೂ ಮಾತೇ ಹೊರಡಲಿಲ್ಲ.

ಆಗ ಗಂಡು ಪಿಶಾಚಿ, " ಶರೀರದಲ್ಲಿ ಬಂದ ಲೋಪಗಳನ್ನು ಸರಿತಿದ್ದಿಕೊಳ್ಳಲು ಸಾಧ್ಯವಾಗಲಿಕ್ಕಿಲ್ಲ, ಅಂತಹ ಲೋಪಗಳಿದ್ದವರನ್ನು ನೋಡಿ ಅಸಹ್ಯ ಪಡುವುದೆಂದರೆ ಕ್ಷಮಿಸಲಾಗದ ಅಪರಾಧ. ಜೀವನ ವಿಡೀ ಕಲೆತುಕೊಂಡಿರಬೇಕಾದ ಗಂಡ ಹೆಂಡಿರ ನಡುವೆ ಇರಬೇಕಾದುದು ಪ್ರೇಮವೂ ಪರಸ್ಪರ ಆದರಣೆಯೂ ಆಗಿವೆ. ನೀವು ನಿಮ್ಮ ಹೆಂಡಂದಿರ ಲೋಪಗಳನ್ನು ಲಕ್ಷ್ಯ ಮಾಡದೆ ಅವರ ಗುಣಗಳನ್ನು ಗೌರವಿಸಲು ಕಲಿತುಕೊಂಡು ಸುಖವಾಗಿದ್ದರೆ ಇರಿ, ಇಲ್ಲದಿದ್ದರೆ ನಿಮ್ಮ ಕರ್ಮ ಅನುಭವಿಸಿರಿ. ಇನ್ನೂ ನಮ್ಮ ಮೇಲೆ ತಪ್ಪು ಹಾಕಿದರೆ, ಈಗಲೇ ನಿಮ್ಮನ್ನು..." ಎನ್ನುವಷ್ಟರಲ್ಲಿ, "ಬೇಡ ಬೇಡ! ಈಗಲೇ ನನಗೆ ನಿಜವಾಗಿಯೂ ಕಣ್ಣು ಬಂತು !" ಎಂದನು ಚಿದಂಬರ. "ಈಗಲೇ ನನ್ನ ಕಿವುಡು ನಿಜವಾಗಿ ಹೋಯಿತು !" ಎಂದನು ನಿತ್ಯಾನಂದ.





# ಸತ್ಯದ ಮಹಿಮೆ

ಪೂರ್ವ ಕಾಲದಲ್ಲಿ ನವನೀತಪುರವನ್ನು ಸತ್ಯಶೀಲ ನೆಂಬ ರಾಜನು ಪ್ರಜಾರಂಜಕನಾಗಿ ರಾಜ್ಯವಾಳುತ್ತಾ ಇದ್ದನು. ಅವನು ಹೆಸರಿಗೆ ತಕ್ಕ ಹಾಗೆ ಸತ್ಯವನ್ನು ನಿಷ್ಠೆಯಿಂದ ಹಿಡಿದುಕೊಂಡು, ಧರ್ಮ ನ್ಯಾಯಗಳಲ್ಲಿ ಆದರ್ಶ ರಾಜನಾಗಿ ರಾರಾಜಿಸುತ್ತಿದ್ದನು. ಅಂತಲೇ ಸತ್ಯಶೀಲನ ಅರಮನೆಯಲ್ಲಿ ಲಕ್ಷ್ಮಿ, ಯಶಸ್ಸು, ಧರ್ಮ, ಸತ್ಯ, ಶೌಚ ಮೊದಲಾದುವು ನೆಲೆ ನಿಂತಿರುವುವೆಂದು, ಅವನ ಅರಮನೆಯೇ ಅವುಗಳ ತೌರು ಮನೆಂಗೆಂದು ಹೇಳಿಕೊಳ್ಳುತ್ತಿದ್ದರು.

ದೇಶದಲ್ಲಿ ವ್ಯಾಪಾರವು ಹೆಚ್ಚಾದರೆ ದೇಶದ ಸಂಪತ್ತು ಹೆಚ್ಚಿ ಜನರು ಸುಭಿಕ್ಷವಾಗಿರುವರೆಂಬ ಉದ್ದೇಶದಲ್ಲಿ ಸತ್ಯಶೀಲನು ಒಂದು ಪದ್ಧತಿಯನ್ನು ಅಮಲಿಗೆ ತಂದನು. ಅವನು ಪ್ರತಿ ದಿನ ಬೆಳಗ್ಗೆ ಮೊತ್ತ ಮೊದಲು ತನ್ನ ಪ್ರಾಂಗಣಕ್ಕೆ ಬರುವ ವ್ಯಾಪಾರದ ವಸ್ತುವನ್ನು ಚೌಕಾಸಿ ಮಾಡದೆ ಕೊಂಡುಕೊಳ್ಳುವನು, ಯಾರು ಯಾವ ಸರಕು ಆ ಪ್ರಾಂತವಾಗಿ ತಂದರೂ ಸರಿಯೇ ಹೇಳಿದ ಬೆಲೆ ಕೊಟ್ಟು ತೆಗೆದುಕೊಳ್ಳುತ್ತಿದ್ದನು. ವರ್ತಕದಲ್ಲಿ ನಷ್ಟಪಟ್ಟವರೂ, ವ್ಯಾಪಾರವಾಗದೆ ಸರಕು ಉಳಿದುಹೋದವರೂ ಬೆಳಗ್ಗೆ ತಮ್ಮ ಸರಕನ್ನು ರಾಜನ ಮನೆಯ ಹತ್ತಿರ ತಂದು ಮಾರಿ ತಮ್ಮ ಕಷ್ಟವನ್ನು ಸ್ವಲ್ಪ ಮಟ್ಟಿಗೆ ಪರಿಹರಿಸಿಕೊಳ್ಳುತ್ತಾರೆ.

ನವನೀತಪುರದಲ್ಲಿ ಒಬ್ಬ ದರಿದ್ರ ಬ್ರಾಹ್ಮಣನಿದ್ದನು. ಅವನನ್ನು ದಾರಿದ್ರ್ಯವು ಹಿಡಿದು ಬಹಳ ಕಾಲದಿಂದ ಪೀಡಿಸಿಕೊಂಡಿತ್ತು. ಏನು ಮಾಡಿದರೂ ದಾರಿದ್ರ್ಯವು ಅವನನ್ನು ಬಿಡಲಿಲ್ಲ. " ಈ ದಾರಿದ್ರ್ಯವು ಯಾರೂ ಕೊಂಡುಕೊಳ್ಳದ ಸರಕಿನ ಹಾಗೆ ನನ್ನನ್ನು ಸೇರಿದೆ. ಇದನ್ನು ನಾನು ವರ್ತಕ ಧರ್ಮದಂತೆ ರಾಜನಿಗೇ ಏಕೆ ಮಾರಬಾರದು?" ಎಂದು ಕೊಂಡನು ಆ ಬ್ರಾಹ್ಮಣ.

ಒಂದು ದಿನ ಅವನು ತನ್ನ ದಾರಿದ್ರ್ಯದ ಚಿಹ್ನೆಗಳಾದ, ಒಡಕು ಪಾತ್ರೆಗಳು, ಹಳೆಯ ಚಿಂದಿಗಳು, ಹರಿದ ಕಂಬಳಿ, ಕಿತ್ತು ಹೋದ ತೇಪೆಚಪ್ಪಲಿಗಳನ್ನೆಲ್ಲ ಒಂದು ಗಂಟು ಕಟ್ಟಿಕೊಂಡು ತಲೆಯ ಮೇಲೆ ಹೊತ್ತು, ಬೆಳಗ್ಗಿನ ಹೊತ್ತಿನಲ್ಲಿ ರಾಜನ ಮನೆಯ ಹತ್ತಿರ, "ದಾರಿದ್ರ್ಯ ಕೊಂಡುಕೊಳ್ಳುವಿರಾ ದಾರಿದ್ರ್ಯ!" ಎಂದು ಗಟ್ಟಿಯಾಗಿ ಕೂಗುತ್ತಾ ಬಂದನು. ಸತ್ಯಶೀಲ ರಾಜನು ಆ ಕೂಗನ್ನು ಕೇಳಿ,

"ಯಾರೋ ಏನೋ ಸರಕು ಮಾರಲು ತಂದಿದ್ದಾರೆ, ನನ್ನ ಬಳಿಗೆ ಕರೆದುಕೊಂಡು ಬಾ" ಎಂದು ಭಟನನ್ನು ಕಳುಹಿಸಿದನು.

ಬ್ರಾಹ್ಮಣನು ರಾಜನ ಮುಂದೆ ಬಂದು ಗಂಟನ್ನು ಕೆಳಗಿಳಿಸಿ, ನಮಸ್ಕಾರ ಮಾಡಿ, "ಮಹಾಪ್ರಭೂ, ನನಗಿದ್ದುದನ್ನೆಲ್ಲಾ ಮಾರಿಬಿಡೋಣವೆಂದು ತಂದಿದ್ದೇನೆ. ಇಷ್ಟೇ ಇದೆ" ಎಂದು ಗಂಟನ್ನು ತೋರಿಸಿದನು.

"ಹಾಗೇನು? ಗಂಟಿನಲ್ಲಿ ಏನಿದೆ?" ಎಂದು ಕೇಳಿದನು ರಾಜ.

"ದಾರಿದ್ರ್ಯ ಮಹಾರಾಜಾ. ನನ್ನ ಸ್ವಂತದ ದಾರಿದ್ರ್ಯ" ಎಂದನು ಬ್ರಾಹ್ಮಣ.

ರಾಜನು ಒಂದು ಕ್ಷಣ ಆಲೋಚನೆ ಮಾಡಿದನು. ಬ್ರಾಹ್ಮಣನು ವರ್ತಕ ರೀತಿಯಲ್ಲೇ ಮಾತಾಡುತ್ತಾನೆ. ಯಾವ ವರ್ತಕನಾದರೂ ತನಗೆ ಉಪಯೋಗವಿಲ್ಲದುದನ್ನು ತಾನೇ ಮಾರುತ್ತಾನೆ?

ಈ ವಿಧವಾಗಿ ಆಲೋಚಿಸಿ ಸತ್ಯಶೀಲ ರಾಜನು ಬ್ರಾಹ್ಮಣನೊಂದಿಗೆ "ನಿನ್ನ ದಾರಿದ್ರ್ಯದ ಬೆಲೆ ಎಷ್ಟು?" ಎಂದು ಕೇಳಿದನು.

"ಐನೂರು ವರಹಗಳಿಗೆ ಮಾರುತ್ತೇನೆ ಸ್ವಾಮಿ" ಎಂದನು ಬ್ರಾಹ್ಮಣ.

ರಾಜನು ಬ್ರಾಹ್ಮಣನಿಗೆ ಐನೂರು ವರಹಗಳನ್ನು ಕೊಡಿಸಿ, ಅವನ ದಾರಿದ್ರ್ಯದ ಗಂಟನ್ನು ಹಳೇ ಸಾಮಾನಿನ ಕೊಟ್ಟಿಗೆಯೊಳಗೆ ಇಡಿಸಿದನು.

ಇದಾದನಂತರ ರಾಜನು ನಿದ್ರೆಯಲ್ಲಿರುವಾಗ ಅವನಿಗೊಂದು ಕನಸಾಯಿತು. ಆ ಕನಸಿನಲ್ಲಿ ದೇವತಾ ಸ್ತ್ರೀಯೊಬ್ಬಳು ತನ್ನ ಮನೆಯೊಳಗಿನಿಂದ ಹೊರಗೆ ಹೋಗುತ್ತಿದ್ದಳು, ರಾಜನು ಅವಳನ್ನು ನೋಡಿ, "ಯಾರಮ್ಮಾ ನೀನು? ಯಾವಾಗ ನನ್ನ ಮನೆಯೊಳಗೆ ಬಂದೆ? ಈಗ ಎಲ್ಲಿಗೆ ಹೋಗುವೆ?" ಎಂದು ಕೇಳಿದಳು,



"ನಾನು ಲಕ್ಷ್ಮೀದೇವಿ. ಇಷ್ಟು ಕಾಲ ನಿನ್ನ ಮನೆಯೊಳಗೇ ಸಂತೋಷವಾಗಿದ್ದವಳು. ಈ ದಿನ ನೀನು ದಾರಿದ್ರ್ಯವನ್ನು ಕೊಂಡುಕೊಂಡು ಮನೆಯೊಳಗೆ ಇಟ್ಟಿರುವೆ. ಅದಿರುವಲ್ಲಿ ನಾನಿರಲು ಸಾಧ್ಯವಿಲ್ಲ. ಅದಕ್ಕೇ ಹೊರಟುಹೋಗುತ್ತೇನೆ" ಎಂದಳು ಲಕ್ಷ್ಮಿ.

"ಹಾಗೋ? ಸರಿ. ನಿನ್ನ ಇಷ್ಟ, ಕರೆಯದೆ ಬುದ್ಧಿಪೂರ್ವಕವಾಗಿ ಬಂದವಳು. ತಕ್ಕ ಕಾರಣವಿದ್ದೇ ಹೋಗುವವಳು. ಆಕ್ಷೇಪಿಸುವ ಹಕ್ಕು ನನಗಿಲ್ಲ" ಎಂದನು ಸತ್ಯಶೀಲ ರಾಜ.

ಲಕ್ಷ್ಮಿ ಹೊರಟುಹೋದ ಮರುಕ್ಷಣದಲ್ಲಿ ಇನ್ನೊಬ್ಬಳು ದೇವತೆ ಹೊರಟುಹೋಗುವುದನ್ನು ನೋಡಿ ರಾಜನು, ಲಕ್ಷ್ಮಿಯನ್ನು ಕೇಳಿದಂತೆಯೇ ಅವಳನ್ನು ಕೇಳಿದನು.

"ನಾನು ಧರ್ಮದೇವಿ, ಲಕ್ಷ್ಮಿ ಹೋದ ಮೇಲೆ ನನ್ನಿಂದ ನಿನಗೆ ಯಾವ ಉಪಯೋಗವೂ ಇಲ್ಲ. ಲಕ್ಷ್ಮಿ

ಇಲ್ಲಿ ಇದ್ದುದರಿಂದಲೇ ನಾನು ಇಷ್ಟು ಕಾಲ ಇಲ್ಲಿದ್ದೆನು " ಎಂದಳು ಧರ್ಮದೇವಿ.

ಹಾಗೆಯೇ ನ್ಯಾಯದೇವತೆ ಕೂಡಾ ಹೊರಟು ಹೋಗುತ್ತ, "ಧರ್ಮವಿಲ್ಲದ ಕಡೆಯಲ್ಲಿ ನ್ಯಾಯ ಸೂತ್ರಕ್ಕೆ ಆಧಾರವಿಲ್ಲ ರಾಜಾ. ನಾನೂ ಹೋಗುತ್ತೇನೆ" ಎಂದು ಹೊರಟುಹೋದಳು.

ಆಮೇಲೆ ಕೀರ್ತಿ ದೇವತೆ ಕೂಡಾ ರಾಜನ ಹತ್ತಿರ ಅಪ್ಪಣೆ ಪಡೆದು ಹೊರಟುಹೋದಳು. ತನ್ನನ್ನು ಅಭಿಮಾನಿಸಿದ ದೇವತೆಗಳೆಲ್ಲಾ ತನ್ನನ್ನು ಬಿಟ್ಟು ಹೋದರೆಂದು ಸತ್ಯಶೀಲನು ಚಿಂತಿಸುತ್ತಿರಲು, ಮತ್ತೊಬ್ಬಳು ದೇವಿ ಕೂಡಾ ಹೊರಗೆ ಹೋಗುವುದು ಕಂಡು ಬಂದಿತು.

"ಅಮ್ಮಾ, ನೀನು ಯಾರು ? ಏಕೆ ಹೊರಟು ಹೋಗುವಿ ?" ಎಂದು ಸತ್ಯಶೀಲನು ಕೇಳಿದನು.

"ನಾನು ಸತ್ಯದೇವತೆ. ಜತೆಗಾತಿಯರೆಲ್ಲರೂ ಹೊರಟುಹೋದ ಮೇಲೆ, ನನ್ನಲ್ಲಿ ನಿನಗೆ ಈ ಮೊದಲು ಇದ್ದ ಹಾಗೆ ಆದರಣೆ ಇರಲಾರದೆಂದು ಕೊಂಡು ನಾನು ಕೂಡಾ ಹೊರಟು ಹೋಗುತ್ತಿದ್ದೇನೆ" ಎಂದಳು ಸತ್ಯದೇವತೆ.

"ಅಮ್ಮಾ ! ನೀನೊಬ್ಬಳು ಗಟ್ಟಿಯಾಗಿದ್ದರೆ ಸಾಕೆಂತಲೇ ಅವರನ್ನೆಲ್ಲಾ ತಡೆಯದೆ ಬಿಟ್ಟೆನು. ಅವರೆಲ್ಲಾ ಹೊರಟುಹೋಗುವವೆಂದುದು ಸಕ್ರಮವೆಂದೇ ತೋರಿತು. ಆತ್ಮೀಯಳಾದ ನೀನು ಹೊರಟು ಹೋಗುವುದು ಮಾತ್ರ ಸರಿಯಲ್ಲವಮ್ಮಾ. ನಾನು ಸತ್ಯವನ್ನು ಬಿಟ್ಟು ನಡೆದಿದ್ದೇನೆಯೇ ? ನನ್ನ ಮಾತು ಸುಳ್ಳಾದರೆ ನ್ಯಾಯದೇವತೆಯನ್ನು ಕೇಳಿ ಬಾ" ಎಂದನು ಸತ್ಯಶೀಲ ರಾಜ.

"ನಿನ್ನಿಂದ ನನಗೆ ಯಾವ ಅಪಚಾರವೂ ನಡೆಯಲಿಲ್ಲ. ನಿನ್ನ ದೂತಿನ ಸತ್ಯವನ್ನುಳಿಸಿಕೊಳ್ಳಲು ನೀನು ದಾರಿದ್ರ್ಯವನ್ನು ಕೊಂಡುಕೊಂಡು ನನಗೆ ಮರ್ಯಾದೆ ಕೊಟ್ಟವನೇ ನಿಜ. ಆದ್ದರಿಂದ ಹೋಗುವುದಿಲ್ಲಪ್ಪ !" ಎಂದು ಸತ್ಯದೇವಿ ಹಿಂದಿರುಗಿದಳು.

ಕೂಡಲೇ ಉಳಿದ ದೇವಿಯರೆಲ್ಲಾ ಗುಂಪಾಗಿ ಒಳಗೆ ಬರುವುದನ್ನು ರಾಜನು ನೋಡಿ, "ಏನಿದು? ನನ್ನ ಮೇಲೆ ಅಸಂತೃಪ್ತರಾಗಿ ಹೊರಟುಹೋದ ನೀವುಗಳು ಏಕೆ ತಿರುಗಿ ಬರುವಿರಿ ?" ಎಂದು ಕೇಳಿದನು.

"ಸತ್ಯದೇವಿ ಇರುವಲ್ಲಿ ನಾವೆಲ್ಲಾ ಇರಲೇಬೇಕು. ನಮ್ಮೊಂದಿಗೆ ಅವಳು ಕೂಡಾ ಹೊರಟುಬರುವಳೆಂದು ಕೊಂಡೆವು. ಅವಳು ನಿನ್ನನ್ನು ಬಿಟ್ಟು ಬರಲಿಲ್ಲ. ಆದುದರಿಂದ ನಾವೇ ಅವಳಿರುವಲ್ಲಿಗೆ ಬಂದುವು" ಎಂದರು ಅವರೆಲ್ಲ.

ರಾಜನು ಭಕ್ತಿಯಿಂದ ಅವರೆಲ್ಲರಿಗೂ ವಂದಿಸುವಾಗ ಎಚ್ಚರವಾಯಿತು.





ಕ್ಷೀರ ಸಾಗರದ ಮಥನ ಕಾರ್ಯವು ಪ್ರಾರಂಭವಾದರೂ ಅದು ಸುಗಮವಾಗಿ ಸಾಗಲಿಲ್ಲ. ಮೊದಲು ರಾಕ್ಷಸರು ಸರ್ಪದ ಬಾಲಹಿಡಿದ ದೇವತೆಗಳನ್ನು ಪರಿಹಾಸ ಮಾಡುತ್ತ, ಸರ್ಪದ ತಲೆಯ ಭಾಗ ಹಿಡಿದೆವೆಂಬ ಹೆಮ್ಮೆಯಿಂದ ತಮ್ಮ ಭುಜಬಲ ಪ್ರದರ್ಶಿಸುವಂತೆ ಜೋರು ಜೋರಾಗಿ ಎಳೆಯುತ್ತಿದ್ದರು. ದೇವತೆಗಳು ಕೂಡಾ ತಾವೇನೂ ಕಡಿಮೆಯುವರಲ್ಲವೆಂಬುದನ್ನು ತೋರಿಸಲು ರಾಕ್ಷಸರಿಗೆ ತಕ್ಕಹಾಗೆ ಈಡುಕೊಡುತ್ತ ಎಳೆದರು. ಮಥನ ಕಾರ್ಯ ಆರಂಭ ಶೂರತ್ವದ ಮಹಾ ವೇಗದಿಂದ ಸಾಗುತ್ತಿರಲು, ಆ ಘರ್ಷಣೆಯನ್ನು ತಡೆದುಕೊಳ್ಳಲಾಗದೆ ಮಹಾ ಸರ್ಪದ ಅನೇಕ ತಲೆಗಳಿಂದ ಹಾಲಾಹಲವೆಂಬ ಕ್ರೂರ ವಿಷವು ಕಾರ ತೊಡಗಿತು, ರಾಕ್ಷಸರು ಹಾಹಾಕಾರ ಮಾಡುತ್ತ ಹಾರಿಬಿದ್ದು ತಲ್ಲಣಿಸಿದರು.

ಭುಸಭುಸನೆ ಹೊರಡುವ ಹಲಾಹಲ ವಿಷದ ಜ್ವಾಲೆಯನ್ನು ತಾಳಿಕೊಳ್ಳಲಾಗದೆ ಅನೇಕ ಮಂದಿ ರಾಕ್ಷಸರು ಸುಟ್ಟುಮಸಿಯಾದರೂ ಹಾಲಾಹಲವು ಆಕಾಶವನ್ನು ಬಳಸಿ ಬೆಂಕಿಯ ಜ್ವಾಲೆಯಾಗುವುದನ್ನು ನೋಡಿ ಪ್ರಪಂಚವೇ ಸುಟ್ಟುಹೋಗುವ ಅಪಾಯ ಉಂಟಾಯಿತು. ಹೆದರಿ ಕೈಬಿಟ್ಟ ಕಾರಣದಿಂದಾಗಿ ಮಂದರ ಪರ್ವತವು ಸಮುದ್ರದಲ್ಲಿ ಮುಳುಗಿಯೂ ಹೋಯಿತು. ಎಲ್ಲರೂ "ಹರಹರಾ" ಎಂದು ಶಿವನನ್ನು ಪ್ರಾರ್ಥಿಸತೊಡಗಿದರು.

ಕೂಡಲೆ ಶಿವನು ಓಡಿಬಂದು ಹರಡಿದ ಹಾಲಹಲವನ್ನೂ ಬಾಚಿ ಹಿಡಿದು ತನ್ನ ಬಾಯಿಯೊಳಗೇ ಸೇರಿಸಿ, ಪೂರ್ತಿನುಂಗದೆ ಕಂಠಪ್ರದೇಶದಲ್ಲೇ ಇಟ್ಟುಕೊಂಡನು. ಆದರಿಂದ ಶಿವನಿಗೆ ನೀಲಕಂಠ, ಶಿತಿಕಂಠ, ಗರಳಕಂಠನೆಂಬ ಹೆಸರು ಬಂತು. ಹಾಲಾಹಲದ ಗಂಡಾಂತರ ತಪ್ಪಿಹೋಯಿತಾದರೂ ಮುಳುಗಿ ಹೋದ ಮಂದರ ಪರ್ವತಕ್ಕಾಗಿ ದೇವತೆಗಳು ವಿಷ್ಣುವನ್ನು ಪ್ರಾರ್ಥನೆ ಮಾಡಿದ್ದರು.

ವಿಷ್ಣು ದೊಡ್ಡದೊಂದು ಆಮೆಯ ಅವತಾರವನ್ನೆತ್ತಿ ಮುಳುಗಿದ ಮಂದರ ಪರ್ವತವನ್ನು ಬೆನ್ನಿನಲ್ಲಿ

೪. ಕೂರ್ಮಾವತಾರ, ಜಗನ್ಮೋಹಿನಿ



ಹೊತ್ತು, ಮೇಲಕ್ಕೆ ತಂದನು. ಹೀಗೆ ವಿಷ್ಣು ಕೂರ್ಮಾವತಾರದಿಂದ ಮಂದರಗಿರಿಯನ್ನು ಹೊತ್ತುಕೊಂಡು ಸಮುದ್ರದಲ್ಲಿಯೂ, ಪರ್ವತವು ಅತ್ತಿತ್ತ ಬಾಗಿ ಹೋಗದಂತೆ ಶಿಖರಾಗ್ರದಲ್ಲಿ ಕುಳಿತು ಪಾದಗಳಿಂದಲೂ, ಮತ್ತೊಂದು ಕಡೆ ದೇವತೆಗಳ ಜತೆಯಲ್ಲಿ ಸರ್ಪವನ್ನು ಹಿಡಿದು ಕಡೆಯುತ್ತಲೂ ಹೀಗೆ ಬಹು ರೂಪಗಳಿಂದ ಪ್ರವರ್ತಿಸಿದನು.

ಅಲ್ಲಿಂದ ಮುಂದೆ ಸಾಗರ ಮಥನವು ಸಕ್ರಮವಾಗಿ ಸಾಗಿತು. ಹಾಗೆ ಕಡೆಯುತ್ತಾ ಇರುವಾಗ ಕ್ಷೀರಸಾಗರದಿಂದ ಚಂದ್ರನೂ, ಲಕ್ಷ್ಮಿಯೂ, ಕಲ್ಪವೃಕ್ಷವೂ, ಕಾಮಧೇನುವೂ, ಐರಾವತ ಆನೆಯೂ, ಉಚ್ಚೈಃಶ್ರವ ಕುದುರೆಯೂ, ಸುರಾಮಾದಕವೂ, ಇನ್ನೂ ಅನೇಕ ವಿಶೇಷ ವಸ್ತುಗಳೂ ಉದ್ಭವಿಸಿದುವು.

ತಣ್ಣಗಿನ ಚಂದ್ರನನ್ನು ಶಿವನು ತನ್ನ ಕಂಠದೊಳಗಿನ ಹಾಲಾಹಲದ ಬಿಸಿಗೆ ಉಪಶಮನವಾಗಿ ತಲೆಯ ಮೇಲೆ ಧರಿಸಿ ಚಂದ್ರಶೇಖರನಾದನು. ಲಕ್ಷ್ಮೀದೇವಿ ಶ್ರೀವತ್ಸ, ಕೌಸ್ತುಭ ಮಣಿಗಳು ಸೇರಿದ ವೈಜಯಂತಿಮಾಲೆಯನ್ನು ಹಿಡಿದುಕೊಂಡು ಬಂದು ವಿಷ್ಣುವಿನ ಕೊರಳಿಗೆ ಹಾಕಿ ಅವನನ್ನು ವರಿಸಿಕೊಂಡಳು. ವಿಷ್ಣು ಲಕ್ಷ್ಮೀಕಾಂತನಾದನು. ಸುರೆಯನ್ನು ದೇವತೆಗಳು ಸ್ವೀಕರಿಸಿ ಸುರರೆನಿಸಿಕೊಂಡರು.

ಕಟ್ಟ ಕಡೆಗೆ ಅಮೃತವು ಸಿದ್ಧಿಸಿತು. ವಿಷ್ಣು, ಆಯುರ್ವೇದಕ್ಕೆ ಮೂಲ ವಿರಾಟನೆನಿಸಿದ ಧನ್ವಂತರಿಯ ಅವತಾರವನ್ನೆತ್ತಿ, ಅಮೃತಕಲಶವನ್ನೂ, ಅನೇಕ ಔಷಧಿಗಳನ್ನೂ ಧರಿಸಿಕೊಂಡು ಪದ್ಮಾಸನದ ಮೇಲೆ ಕುಳಿತ ಭಂಗಿಯಲ್ಲಿ ಸಮುದ್ರದಿಂದ ಉದ್ಭವಿಸಿದನು.

ಅಮೃತಕ್ಕಾಗಿ ಕ್ಷೀರಸಾಗರವನ್ನು ಕಡೆದರೆ ಮೊದಲು ಅನುಭವಿಸಬೇಕಾಗಿ ಬಂದುದು ಹಾಲಾಹಲದ ತಾಪವನ್ನು. ಅನಂತರ ಎಷ್ಟೋ ವಿಶೇಷ ಸಹಾಯಗಳು ಬೇಕಾಗಿ ಬಂದು, ದೈವ ಸಹಾಯವೂ ಒದಗಿ ಕಡೆಗೆ ಅಮೃತವು ಸಿದ್ಧಿಸಿತು. ಆದುದರಿಂದ ಏನಾದರೂ ಶ್ರಮ ದಮಾದಿಗಳಿಂದ ಕೂಡಿದ ಕಾರ್ಯ ಸಾಧನೆಗೆ "ಸಾಗರಮಥನ" ಎಂಬ ಮಾತು ಪರ್ಯಾಯಪದವಾಗಿ ನಿಂತು ಹೋಗಿದೆ.

ಧನ್ವಂತರಿಯ ಕೈಯಲ್ಲಿದ್ದ ಅಮೃತಕಲಶವನ್ನು ರಾಕ್ಷಸರು ಮುಂದೆ ಹಾರಿ ಕಿತ್ತುಕೊಂಡು ಹೋಗಿ, "ಇದು ನಮ್ಮದೇ! ನಮಗೇ!" ಎಂದು ನಲಿದಾಡಿದರು. "ನಮಗೂ ಭಾಗವಿದೆ" ಎಂದು ದೇವತೆಗಳೂ ಅವರೊಂದಿಗೆ ಕಿತ್ತಾಟಕ್ಕೆ ತೊಡಗಿದರು. ದೇವದಾನವರು ಹೀಗೆ ಒಂದೇ ಸಮನೆ ಜಗಳಾಡಿಕೊಂಡಿರುವ ಆ ಸಮಯದಲ್ಲಿ, ಮೂರು ಜಗತ್ತುಗಳನ್ನೂ ಸಮ್ಮೋಹನ ಗೊಳಿಸುವಂತಹ ಜಗನ್ಮೋಹಿನಿಯೊಬ್ಬಳು ಅಲ್ಲಿ ಕಾಣಿಸಿದಳು. ಅವಳೂ ಸಮುದ್ರ ಮಥನದಿಂದ ಹುಟ್ಟಿದವಳೆಂದುಕೊಂಡು ರಾಕ್ಷಸರು ಬೆರಗಾಗಿ ನಿಂತರು. ಮೋಹಿನಿ ರಾಕ್ಷಸರ ಬಳಿಗೇ ಬರುವುದನ್ನು ನೋಡಿ ಅವರಿಗೆಲ್ಲಾ ಆದ ಆನಂದ ಹೇಳಿ

ತೀರದು. ಅವಳು ರಾಕ್ಷಸರೊಂದಿಗೆ ಝೇಂಕರಿಸುವ ಮಂಜುಲ ಸ್ವರದಿಂದ. "ಅಮೃತವನ್ನು ಹೀಗೆ ಕೊಡಿ, ನಾನು ಹಂಚುತ್ತೇನೆ !" ಎಂದು ಕೈ ಚಾಚಿದಳು. ಆ ಕೈಗಳ ಅಂದವನ್ನೂ ಹೇಳಿ ತೀರದು.

ಜಗನ್ಮೋಹಿನಿ ತಮ್ಮೊಂದಿಗೆ ಮಾತಾಡಿದುದಕ್ಕೇ ರಾಕ್ಷಸರು ಸಂತೋಷದಿಂದ ಉಕ್ಕುತ್ತ ಅಮೃತಕಲಶವನ್ನು ಅವಳ ಕೈಗೆ ಒಪ್ಪಿಸಿದರು.

ಅವಳು ಸೈಗೆ ಮಾಡಿದಂತೆ ರಾಕ್ಷಸರೆಲ್ಲ ಸಾಲಾಗಿ ಕುಳಿತರು. ದೇವತೆಗಳು ಕೂಡಾ ಹಾಗೆಯೇ ಸಾಲುಗಟ್ಟಿ ಕುಳಿತರು. ಈ ಉಭಯ ಶ್ರೇಣಿಗಳ ನಡುವಿನಲ್ಲಿ ಮೋಹಿನಿ ನೃತ್ಯ ಮಾಡುವಂತೆ ಅಡಿಗಳ ಮೇಲೆ ಅಡಿ ಇಡುತ್ತ, ಅಮೃತಕಲಶವನ್ನು ಸೊಂಟದಲ್ಲಿಟ್ಟುಕೊಂಡು ಒಯ್ಯಾರವಾಗಿ ಬಾಗಿಸುತ್ತ ನಡೆದಳು.

ಏನು ನಡೆಯುವುದೋ ಎಂದು ನೋಡುತ್ತಿದ್ದ ದೇವತೆಗಳ ಬಾಯಿಗೆ ಅಮೃತವು ಬೀಳುತ್ತಿದ್ದಿತು. ರಾಕ್ಷಸರು ಉನ್ಮತ್ತತೆಯಿಂದ ಅವಳ ನಡಿಗೆಯ ಚೆಂದವನ್ನು ನೋಡುತ್ತಾ ಇದ್ದರು. ಮೋಹಿನಿ ರಾಕ್ಷಸರ ಕಡೆಗೆ ತಿರುಗುವಂತೆ ಕಾಣುವಳೇ ಹೊರತು ಅಮೃತಕಲಶದಿಂದ ಏನೂ ಬೀಳುತ್ತಿರಲಿಲ್ಲ. ಅವಳ ನೋಟವೇ ಅಮೃತದಂತೆ ತೋರುತಿತ್ತು ಅವರಿಗೆ. ಹೀಗೆ ತಮಗೆ ಮಾತ್ರ ಅಮೃತ ನೀಡುವ ಈ ವಿಶ್ವ ಮೋಹಿನಿ ವಿಷ್ಣುವೇ ಎಂದು ದೇವತೆಗಳಿಗೆ ನಿಧಾನವಾಗಿ ಗೊತ್ತಾಯಿತು. ದೇವತೆಗಳ ಗುರಿ ಅಮೃತದ ಮೇಲಿತ್ತು. ರಾಕ್ಷಸರ ಗುರಿ ಜಗನ್ಮೋಹಿನಿಯ ದೃಷ್ಟಿ ರಸದ ಮೇಲಿತ್ತು.

ಜಗನ್ಮೋಹಿನಿಯ ವಿಲಾಸವೆಲ್ಲಾ ವಿಷ್ಣುವಿನ ಚಿದ್ವಿಲಾಸವೆಂದು ತಿಳಿದ ದೇವತೆಗಳು ಅಮೃತ ಪಾನದಿಂದ ಅಮರತ್ವ ಹೊಂದುತ್ತಿದ್ದರೆ, ದೈತ್ಯರು ಜಗನ್ಮೋಹಿನಿಯ ಮೋಹಜಾಲದಲ್ಲಿ ಬಿದ್ದು ಉನ್ಮತ್ತತೆಯಿಂದ ಅಮೃತವನ್ನು ಕಳೆದುಕೊಂಡರು. ಜಗನ್ಮೋಹಿನಿ ತಮಗೆ ವಂಚನೆ ಮಾಡುತ್ತಾಳೆಂದು ರಾಹು ಎಂಬ ಒಬ್ಬನೇ ಒಬ್ಬ ಬುದ್ಧಿವಂತ ರಾಕ್ಷಸನು ಕಂಡು ಹಿಡಿದುಬಿಟ್ಟನು. ಅವನು ಜಲ ರಾಕ್ಷಸಿಯಾದ ಸಿಂಹಿಕೆಯ ಮಗ, ಬಹು ದೊಡ್ಡ ಮಾಯಾವಿ. ನಡೆಯುವ ಮೋಸವನ್ನು ಹೇಳಿದರೂ ರಾಕ್ಷಸರು ಕೇಳುವ ಸ್ಥಿತಿಯಲ್ಲಿಲ್ಲ. ಕೇಳಿ ಗಲಾಟೆ ಮಾಡಿದರೂ ಮೋಹಿನಿಯ ಕೈಯಲ್ಲಿರುವ ಅಮೃತ ಸಿಗುವಂತಿಲ್ಲ. ಅಂತಲೇ ತಾನೊಬ್ಬ ದೇವತೆಯ ರೂಪತಾಳಿ, ದೇವತೆಗಳ ಪಂಕ್ತಿಯಲ್ಲಿ ಸೇರಿ. ಅವನ ಬಾಯಿಗೆ ಬಿದ್ದ ಅಮೃತವನ್ನು ನುಂಗುತ್ತಿರುವಾಗ ಸೂರ್ಯಚಂದ್ರರು ಅದನ್ನು ಗಮನಿಸಿದರು. ಆಗ ಮಂದರ ಪರ್ವತದ ಮೇಲೆ ವಿಷ್ಣುವಾಗಿದ್ದ ಬಹು ರೂಪೀ ವಿಷ್ಣುವಿನೊಡನೆ ಈ ಸಮಾಚಾರವನ್ನು ಹೇಳಿದರು. ಕೂಡಲೇ ವಿಷ್ಣು ತನ್ನ ಚಕ್ರವನ್ನು ರಾಹುವಿನ ಕಡೆಗೆ ಕಳುಹಿಸಿದನು.



ಅಷ್ಟರೊಳಗೆ ರಾಹು ಅಮೃತವನ್ನು ನುಂಗಿಯಾಗಿತ್ತು. ತನ್ನ ಕಡೆಗೆ ಬರುವ ಚಕ್ರದಿಂದ ತಪ್ಪಿಸಿ



ಕೊಳ್ಳಲು ಅವನು ಗ್ರಹಲೋಕದ ಕಡೆಗೆ ಎಗರಿ ಹೋದನು. ವಿಷ್ಣು ಚಕ್ರವು ಅವನ ಬೆನ್ನಟ್ಟಿ ಅವನ ತಲೆಯನ್ನು ಮುಂಡದಿಂದ ಬೇರ್ಪಡಿಸಿತು. ಅಮೃತದ ಪ್ರಭಾವದಿಂದ ತಲೆಯೂ, ಮುಂಡವೂ ಸಜೀವವಾಗಿದ್ದು, ತಲೆ ಮಾತ್ರ ರಾಹು ಎಂಬ ಹೆಸರಿನಲ್ಲಿಯೂ, ಮುಂಡವು ಕೇತು ಎಂಬ ಹೆಸರಿನಲ್ಲಿಯೂ ಗ್ರಹಕೂಟದಲ್ಲಿ ಸೇರಿಕೊಂಡುವು. ಈ ಎರಡು ಹೊಸ ಗ್ರಹಗಳಿಂದ ಗ್ರಹಗಳು ಒಂಬತ್ತಾದುವು.

ಸೂರ್ಯಚಂದ್ರರು ದೂರು ಹೇಳಿದರೆಂಬ ಹಗೆ ಇಟ್ಟುಕೊಂಡು ಹುಣ್ಣಿಮೆ, ಅಮಾವಾಸ್ಯೆಯ ಪರ್ವ ದಿನಗಳಲ್ಲಿ, ರಾಹು ಕೇತುಗಳು ಸೂರ್ಯಚಂದ್ರರನ್ನು ಹಿಡಿದು ಪೀಡಿಸತೊಡಗಿದುವು. ಆ ವಿಧವಾಗಿ ಸೂರ್ಯಚಂದ್ರರಿಗೆ "ಗ್ರಹಣಗಳು" ಉಂಟಾಗುತ್ತವೆ. ಅಮೃತವನ್ನು ದೇವತೆಗಳಿಗೆಲ್ಲಾ ಹಂಚಿಯಾದ ಮೇಲೆ ಅಮೃತ ಕಲಶದೊಂದಿಗೆ ಮೋಹಿನಿ ಅಂತರ್ಧಾನಳಾದಳು. ಆಮೇಲೆ ಎಚ್ಚರಕ್ಕೆ ಬಂದ ರಾಕ್ಷಸರು ತಮ್ಮ ಮತಿಹೀನತೆಯನ್ನು ದೂರಿಕೊಂಡು, ಆಗಿನಿಂದಲೂ ವಿಷ್ಣುವನ್ನೂ, ದೇವತೆಗಳನ್ನೂ ಶತ್ರುಭಾವದಿಂದಲೇ ನೋಡತೊಡಗಿದರು. ಕ್ರಮೇಣ ಬದ್ಧ ಶತ್ರುಗಳೇ ಆದರು.

ಅಮೃತ ಮಥನದ ಸಂದರ್ಭದಲ್ಲಿ ವಿಷ್ಣು ಕೂರ್ಮಾವತಾರವನ್ನೂ, ಧನ್ವಂತರಿಯ ಅವತಾರವನ್ನೂ, ಜಗನ್ಮೋಹಿನಿಯ ಅವತಾರವನ್ನೂ ಎತ್ತಿದನು. ಧನ್ವಂತರಿ ಅಮೃತ ಮಾತ್ರವಲ್ಲದೆ. ಔಷಧಿಗಳಿಗೆ ಮೂಲಾಧಾರವಾದ ಆಯುರ್ವೇದವನ್ನೂ ತಂದನು. ಆದುದರಿಂದ ವೈದ್ಯಶಾಸ್ತ್ರಕ್ಕೆ ಧನ್ವಂತರಿ ಅಧಿದೇವತೆಯಾಗಿ, ವೈದ್ಯರ ಕುಲದೈವನಾದನು.

ಜಗತ್ತಿನ ಸೌಂದರ್ಯ ವಿಲಾಸಗಳಿಗೆ ವಿಶ್ವಮೋಹಿನಿಯಾಗಿರುವ ಮೋಹಿನಿಯೇ ಸೌಂದರ್ಯಗಳಿಗೆ ಉದಾಹರಣೆಯಾಗಿ ನೆಲೆನಿಂತಳು.

ನಾರದನು ಜಗನ್ಮೋಹಿನಿಯ ಅವತಾರವನ್ನು ಕೀರ್ತಿಸುತ್ತ, ಜಗನ್ಮೋಹಿನೀರಾಗವನ್ನು ತನ್ನ ಮಹತೀ ವೀಣೆಯಿಂದ ಹೊರಡಿಸುತ್ತಾ ಕೈಲಾಸಕ್ಕೆ ಹೋದನು. ಆ ರಾಗಾಲಾಪನೆಯಿಂದ ಪಾರ್ವತೀ ದೇವಿ ಮುಗ್ಧಳಾಗಿ, "ಜಡ ಸೋಮಾರಿಗಳಾದ ರಾಕ್ಷಸರನ್ನು ತನ್ನ ವೈಯಾರದಿಂದ ವಂಚಿಸಿ ಬಿಟ್ಟ ಮಾತ್ರಕ್ಕೆ ಅದೊಂದು ದೊಡ್ಡ ಜಗನ್ಮೋಹಿನೀ ಅವತಾರವಾಗಿ ಬಿಡುವದೇನು? ಅಂತಹುದಕ್ಕೆ ಮೋಸ ಹೋಗದ ವಿವೇಕಿಗಳಿಲ್ಲವೆಂದು ನಿನ್ನ ಭಾವನೆಯೇ ನಾರದಾ?" ಎಂದಳು ನಗುತ್ತಾ.

"ಹೌದಮ್ಮಾ. ಎಂತಹವರನ್ನಾದರೂ ರಂಜನಗೊಳಿಸಿ ಈ ವಿಶ್ವವನ್ನೇ ಓಲಾಡಿಸುವಂತಹ ವಿಶ್ವಮೋಹಿನಿಯವಳು!" ಎಂದು ಹೇಳಿ, ಅದೇ ರಾಗವನ್ನು ಮುಂದುವರಿಸುತ್ತಾ ಅಲ್ಲಿಂದ ಹೊರಟು ಹೋಗಿಬಿಟ್ಟನು.

ಪಾರ್ವತಿ ಆ ವಿಷಯವನ್ನು ಶಿವನೊಂದಿಗೆ ಹೇಳಿದಳು. ಶಂಕರನು ಕಿರುನಗುವಿನೊಂದಿಗೆ ಕೇಳುತ್ತಾ

ತಲೆದೂಗಿ ಸುಮ್ಮನಿದ್ದನು. ತನ್ನ ಮಾತು ಸರಿಯೆಂದು ತನ್ನ ಪತಿ ಹೇಳಲಿಲ್ಲವಲ್ಲಾ ಎಂದು ಪಾರ್ವತಿ ಮನಸ್ಸಿನಲ್ಲೇ ಕೊರಗಿದಳು. ಶಿವನು ಅವಳನ್ನು ಕರೆದುಕೊಂಡು ನಂದಿ ವಾಹನನಾಗಿ ವೈಕುಂಠಕ್ಕೆ ಹೋದನು.

ಅಲ್ಲಿ ವಿಷ್ಣುವಿನೊಂದಿಗೆ ಶಿವನು, "ಸಮುದ್ರ ಮಥನ ಕಾಲದಲ್ಲಿ ಹಾಲಾಹಲವನ್ನು ತರಹರಿಸಿಕೊಳ್ಳುವ ಗಲಾಟೆಯಲ್ಲಿ ನಡೆದುದನ್ನೆಲ್ಲಾ ಚೆನ್ನಾಗಿ ನೋಡಲಿಲ್ಲ. ನಾರದನೇನೋ ನಿನ್ನ ಜಗನ್ಮೋಹಿನೀ ಅವತಾರವನ್ನು ಭಾರೀ ಹೊಗಳುತ್ತಾನೆ.ಅದನ್ನೊಮ್ಮೆ ನೋಡಲಿಕ್ಕೇ ಬಂದಿದ್ದೇವೆ" ಎಂದನು.

"ಏನೋ ಬಿಡಯ್ಯ. ಅಗತ್ಯ ಬಿದ್ದ ಹಾಗೆ ಎಂತೆಂತಹುದೋ ವೇಷ ಹಾಕಬೇಕಾಗಿ ಬರುತ್ತೆ. ನಿನ್ನಂಥ ದೊಡ್ಡವನ ಮುಂದೆ ಅದೆಲ್ಲ ಏಕೆ, ಬಿಡಯ್ಯ" ಎಂದು ವಿಷ್ಣು ಸ್ವಲ್ಪ ಹೊತ್ತಿಗೆ ಅಂತರ್ಧಾನನಾಗುವಾಗಲೇ ನೂಪುರಗಳ ಧ್ವನಿ ಎಲ್ಲಿಯೋ ಕೇಳ ಬಂದಿತು. ಶಿವಪಾರ್ವತಿಯರು ಅತ್ತಿತ್ತ ನೋಡಿದರು.

ಸಮೀಪದಲ್ಲಿದ್ದ ಹೂದೋಟದಲ್ಲಿ ಹೂಚೆಂಡುಗಳೊಡನೆ ಆಡುತ್ತ ಸಣ್ಣಗೆ ಹಾಡುತ್ತ ಜಗನ್ಮೋಹಿನಿ ಅವರ ಕಣ್ಣಿಗೆ ಬಿದ್ದಳು. ಶಿವನು ಸರ್ವವನ್ನೂ ಮರೆತು ಅವನ ಪಾಡಿಗೆ ಅವಳ ಕಡೆಗೆ ಹೋದನು. ಜಗನ್ಮೋಹಿನಿ ಶಿವನ ಕೈಗೆ ಸಿಕ್ಕದೆ ವಿಶ್ವಾಕಾಶದಲ್ಲಿ ಸಾಗಿದಳು. ಶಿವನು ಕೈಗಳನ್ನು ಚಾಚಿಕೊಂಡು ಅವಳ ಹಿಂದೆಯೇ ಹೋದನು, ಪಾರ್ವತಿ ಏನು ಮಾಡಲೂ ತೋರದೆ ನಿರ್ವಿಣ್ಣಳಾಗಿ ನೋಡುತ್ತ ನಿಂತಳು.

ಶಿವಮೋಹಿನಿಯರ ಚಲನ ವಲನ ಗಮನಗಳ ಲೀಲಾ ವಿನೋದಗಳನ್ನು ಬ್ರಹ್ಮಾದಿ ದೇವತೆಗಳು ಕಣ್ಣಿಗೆ ಹಬ್ಬವಾಗುವಂತೆ ನೋಡಿದರು. ನಂದಿ ಅನಾಥನಂತೆ ಬೆರಗಾಗಿ ನೋಡುತ್ತಿದ್ದನು. ನಾರದನು ಮಹತೀವೀಣೆಯಲ್ಲಿ ಶಿವರಂಜನಿ ರಾಗವನ್ನು ಉಜ್ವಲವಾಗಿ ಮಾರ್ಮೊಳಗುವಂತೆ ಸ್ತೋತ್ರ



ಮಾಡುತ್ತಿದ್ದನು. ಮುಂದೆ ಜಗನ್ಮೋಹಿನಿಯೂ, ಅವಳ ಹಿಂದೆ ಶಿವನೂ ವಿಶ್ವಾಂತರಗಳಲ್ಲಿ ಓಡುತ್ತಿದ್ದರು. ಅವರು ಎಲ್ಲಿಗೆ ಹೋದರು. ಏನಾದರೆಂದು ತಿಳಿಯದೆ ಪಾರ್ವತಿ ಕೈಲಾಸವನ್ನು ಸೇರಿಕೊಂಡಳು.

ಜಗನ್ಮೋಹಿನಿ ತೇಜೋಮಂಡಲಗಳ ಮೇಲೆ ತೂರಿಕೊಂಡು ಹೋಗಿ, ಶಿವನನ್ನು ವಿಶ್ವದಲ್ಲೆಲ್ಲಾ ಅಲೆದಾಡಿಸಿ ಕೈಲಾಸಕ್ಕೆ ಹೋದಳು. ಅಲ್ಲಿ ಮೋಹಿನಿ ಪಾರ್ವತಿಯ ಹತ್ತಿರ ನಿಂತು, ಶಿವನನ್ನು ನೋಡಿ "ನನ್ನನ್ನು ಮುಟ್ಟಬೇಡಯ್ಯಾ!" ಎಂದಳು. ಆಗ ಶಿವನು ಅವಳ ಹತ್ತಿರ ಹಾರಿ ಬಂದು ಅವಳ ನಡುವನ್ನು ಸುತ್ತಿ ಹಿಡಿದು ಮೊಣಕಾಲೂರಿದನು.

"ನೋಡಿದೆಯಾ ಅಮ್ಮಾ, ನಿನ್ನ ಪ್ರಾಣೇಶ್ವರನ ಕಾಟ!" ಎಂದು ಮೋಹಿನಿ ಶಿವನು ಇನ್ನೇನು ಮಾಡುವನೋ ಎಂದು ಹೆದರಿ ಪಾರ್ವತಿಯನ್ನು ಒತ್ತಿನಿಂತಳು. "ಅಷ್ಟೇ ಅಮ್ಮಾ, ಎಷ್ಟು ದೊಡ್ಡವನಾದರೂ ಅಷ್ಟೇನೇ!" ಎನ್ನುತ್ತ ನಾರದನು ಮಹತಿ



ಯನ್ನು ಬಾರಿಸುತ್ತಾ ಅಲ್ಲಿಗೆ ಬಂದು, ಜಗನ್ಮೋಹಿನಿ ಶಿವರಂಜನಿ ರಾಗಗಳಲ್ಲಿ ಹರಿಹರರ ಲೀಲಾ ವಿಲಾಸವನ್ನು ಗಾಯನ ಮಾಡುತ್ತಾ ಅಲ್ಲಿಂದ ಹೊರಟು, ಮೂರು ಲೋಕಗಳಲ್ಲಿಯೂ ತಿರುಗಾಡಿದನು. ಅವನಿಗೆ ಆನಂದವೇ ಆನಂದ.

ಶಿವನು ವಿಷ್ಣುವಿನೊಂದಿಗೆ, "ರಾಕ್ಷಸರು ಅಮೃತದ ಸಂಗತಿ ಮರೆತು, ನಿನ್ನ ಜಗನ್ಮೋಹಿನಿಯ ವಿಲಾಸವನ್ನು ಕಣ್ಣಾರೆ ನೋಡುವ ಭಾಗ್ಯ ಪಡೆದರು. ಅವರನ್ನು ಮೆಚ್ಚಿಕೊಳ್ಳುತ್ತೇನೆ. ರಸ ಪಿಪಾಸೆಯೇ ಅಸುರರ ಸೊತ್ತು ಎಂಬುದರಲ್ಲಿ ಸಂದೇಹವಿಲ್ಲ." ಎಂದನು.

ವಿಷ್ಣು ಕಿರುನಗೆಯೊಂದಿಗೆ ಪಾರ್ವತಿಯನ್ನು ನೋಡಿ, "ಅಮ್ಮಾ, ಮುಂದೆ ಶಿವರಂಜನಿಯಾಗಿ ನಮ್ಮ ಗಂಗಾದೇವಿ ದಿವಿಯಿಂದ ಭುವಿಗೆ ಅವತರಿಸುವ ವೇಳೆಯಲ್ಲಿ ಈ ಮಹಾಶಿವನು ಹೀಗೆಯೇ ಪರವಶನಾಗಿ ನಿನಗೊಬ್ಬಳು ಸವತಿಯನ್ನು ತರುವ ಹಾಗಿದೆ !" ಎಂದು ಹೇಳಿ ನಗುತ್ತಾ, ಅಂತರ್ಧಾನನಾಗಿ ವೈಕುಂಠವನ್ನು ಸೇರಿದನು.

ತರುವಾಯದ ಒಂದು ಕಾಲದಲ್ಲಿ ವಿಷ್ಣು ಕರ್ದಮ ಪ್ರಜಾಪತಿಗೆ ಅವನ ಪತ್ನಿ ದೇವಹೂತಿಯಲ್ಲಿ ಅವರ ಪುತ್ರನಾಗಿ ಕಪಿಲನೆನಿಸಿದನು. ಈ ಕಪಿಲಾವತಾರದಲ್ಲಿ ಚಿಕ್ಕಪ್ರಾಯದಲ್ಲಿಯೇ ಜ್ಞಾನ ಸಂಪನ್ನನಾಗಿದ್ದನು. ತಪಸ್ಸಿನಿಂದ ಕಪಿಲ ಮಹಾಮುನಿಯಾಗಿ ಪ್ರಸಿದ್ಧನಾದನು.

ಕಪಿಲನು ತಾಯಿಯಾದ ದೇವಹೂತಿಗೆ ಹೇಳಿದ ಅನೇಕ ತತ್ವಬೋಧೆಗಳು ಸಾಂಖ್ಯಯೋಗವೆಂದು ಪ್ರಖ್ಯಾತವಾಯಿತು. ಕಪಿಲ ಮಹರ್ಷಿ ಪಾತಾಳ ಲೋಕದ ಒಂದು ಗುಹೆಯಲ್ಲಿ ತಪಸ್ಸು ಮಾಡಿಕೊಂಡಿದ್ದ ಕಾಲದಲ್ಲಿ ಭೂಮಿಯ ಮೇಲೆ ಸಗರ ಚಕ್ರವರ್ತಿ ನೂರನೇ ಅಶ್ವಮೇಧಯಾಗ ಮಾಡಲು ತೊಡಗಿದನು. ಆಗ ಇಂದ್ರನು ಅವನ ಯಾಗಾಶ್ವವನ್ನು ಮಾಯಮಾಡಿ, ಕಪಿಲ ಮಹರ್ಷಿ ತಪಸ್ಸು ಮಾಡುವ ಗುಹೆಯೊಳಗೆ ಅಡಗಿಸಿಟ್ಟನು.

ಸಗರನ ಸಾವಿರಮಂದಿ ಕುಮಾರರು ಆ ಕುದುರೆಯನ್ನು ಹುಡುಕುತ್ತಾ, ಪಾತಾಳದವರೆಗೆ ಬಿಲವನ್ನು ಅಗೆದುಕೊಂಡೇ ಹೋದರು. ಅಲ್ಲಿ ಹುಡುಕುತ್ತಾ ಕಪಿಲ ಮಹರ್ಷಿಯ ಗುಹೆಯಲ್ಲಿ ಯಾಗಾಶ್ವವನ್ನು ನೋಡಿದರು, ಕಪಿಲನೇ ಅಶ್ವವನ್ನು ಅಪಹರಿಸಿದನೆಂದು ವಿಚಾರಸಾಚಾರವಿಲ್ಲದೆ ಅವನನ್ನು ದಂಡಿಸಬೇಕೆಂದು ಮುಗಿಬಿದ್ದರು. ಮಹಾತ್ಮನಾದ ಕಪಿಲನು ಕಣ್ಣು ತೆರೆದು ನೋಡಿದ ಕೂಡಲೇ ಅವರೆಲ್ಲಾ ಸುಟ್ಟು ಬೂದಿಯಾದರು.

ಆ ಭಸ್ಮರಾಶಿಯ ಮೇಲೆ, ವಿಷ್ಣು ಪಾದದಿಂದ ಹುಟ್ಟಿ, ಸ್ವರ್ಗದಲ್ಲಿ ಮಂದಾಕಿನಿಯಾಗಿ ಪ್ರವಹಿಸುವ ಗಂಗೆಯನ್ನು ಹರಿಯಗೊಳಿಸಿ, ಆ ಪಿತೃಗಳಿಗೆ ಸದ್ಗತಿಯನ್ನುಂಟು ಮಾಡಲು ಸಗರನ ಮರಿಮೊಮ್ಮಗನಾದ ಭಗೀರಥನು ಮಹಾತಪಸ್ಸನ್ನು

ಮಾಡಿ ಗಂಗಾದೇವಿಯನ್ನು ಪ್ರಸನ್ನೀಕರಿಸಿಕೊಂಡನು. ಗಂಗೆ ಭೂಮಿಗೆ ಬೀಳುವರಭಸದ ಶಕ್ತಿಯನ್ನು ತಡೆದುಕೊಳ್ಳಲು, ಭಗೀರಥನು ಮತ್ತೆ ತಪಸ್ಸು ಮಾಡಿ ಶಿವನನ್ನು ಪಸನ್ನ ಪಡಿಸಿಕೊಳ್ಳ ಬೇಕಾಯಿತು.

ಹಾಗೆ ಭುವಿಗಿಳಿದ ಗಂಗಾವತರಣದಲ್ಲಿ ಶಿವನು ಗಂಗಾದೇವಿಯನ್ನು ನೋಡಿ ಪರವಶನಾಗಿ, ಗಂಗೆ ಯನ್ನು ತನ್ನ ಜಟಾಜೂಟದೊಳಗೇ ಗಾಢವಾಗಿ ಬಂಧಿಸಿ ಇಟ್ಟುಕೊಂಡನು. ಭಗೀರಥನು ಮತ್ತೆ ಶಿವನ ಮನಸ್ಸನ್ನು ಕರಗಿಸಿದ ಮೇಲೆ, ಶಿವನು ಜಟಾಜೂಟದ ಒಂದು ಎಳೆಯನ್ನು ಬಿಡಿಸಿ ಸಣ್ಣದಾಗಿ ಹರಿಯುವಂತೆ ಬಿಟ್ಟನು. ಗಂಗೆ ಭಗೀರಥನ ಹಿಂದೆಯೇ ಹೋಗಿ ಪಾತಾಳಕ್ಕಿಳಿದು, ಅವನ ಪಿತೃಗಳಾದ ಸಗರಪುತ್ರರ ಭಸ್ಮರಾಶಿಯ ಮೇಲೆ ಹರಿದು, ಅವರಿಗೆಲ್ಲಾ ಸ್ವರ್ಗ ಪ್ರಾಪ್ತಿಯಾಗುವಂತೆ ಮಾಡಿದಳು.

ಶಿವನು ಗಂಗಾಧರನೆಂದು ರಂಜಿಸಿದನು. ಆ ವಿಧವಾಗಿ ಗಂಗೆ ಪಾರ್ವತಿಗೆ ಸವತಿಯಾದಳು.

ವಿಷ್ಣುವಿನ ಮುಂದಿನ ಅವತಾರಗಳಿಗೆ ಮೂಲ ರಾದವರು ಸನಕ ಸನಂದನಾದಿಗಳೆಂದು ಹೇಳಲ್ಪಡುವ, ಸನಕ, ಸನಂದನ. ಸನತ್ಸುಜಾತ, ಸನತ್ಕುಮಾರರೆಂಬ ನಾಲ್ವರು ಬ್ರಹ್ಮ ಮಾನಸಪುತ್ರರು. ಇವರು ಯಾವಾಗಲೂ ಬಾಲಕರಾಗಿಯೇ ಕಾಣುವವರು. ಸಂಪೂರ್ಣ ವಿಷ್ಣು ಭಕ್ತರಾಗಿ ಸದಾ ವಿಷ್ಣುವನ್ನು ಕೀರ್ತಿಸುತ್ತಾ, ನಿರಾತಂಕವಾಗಿ ಲೋಕಸಂಚಾರ ಮಾಡುತ್ತಾ ಇರುವವರು.

ಅಂತಹ ಮಹಿಮಾನ್ವಿತರಾದ ಸನಕಾದಿ ಮುನಿಗಳು ವಿಷ್ಣು ದರ್ಶನದ ಅಪೇಕ್ಷೆಯಿಂದ ವೈಕುಂಠಕ್ಕೆ ಹೋದರು. ಎಲ್ಲಾ ದ್ವಾರಗಳನ್ನೂ ದಾಟಿ ವಿಷ್ಣು ಮಂದಿರದ ದ್ವಾರವನ್ನು ತಲುಪಿದರು.

ಅಲ್ಲಿ ವಿಷ್ಣುವಿಗೆ ಸರಿಸಮನಾದ ರೂಪದಲ್ಲಿ ನಾಲ್ಕು ಕೈಗಳಿಂದ, ಶಂಖ, ಚಕ್ರ, ಗದೆ ಮತ್ತು ಅಭಯ ಮುದ್ರೆಯಿಂದ ದ್ವಾರಪಾಲಕರಾಗಿರುವ ಜಯ ಮತ್ತು ವಿಜಯ ಎಂಬವರು, ವಿಷ್ಣು ದರ್ಶನಕ್ಕೆ ಇದು ಸಮಯವಲ್ಲವೆಂದು ಸನಕಸ ನಂದನಾದಿಗಳನ್ನು ತಡೆದರು.

"ನಮಗೆ ವಿಷ್ಣು ದರ್ಶನಕ್ಕೆ ಸಮಯಾಸಮಯವೇ ನಿಲ್ಲ" ಎಂದು ಸನಕಾದಿಗಳು ಜಯವಿಜಯರನ್ನು ಲಕ್ಷ್ಯಮಾಡದೆ ಒಳಗೆ ಹೋಗಲು ನೋಡಿದಾಗ, ಜಯವಿಜಯರು ಗದೆಗಳನ್ನೆತ್ತಿ ಅವರನ್ನು ಅಡ್ಡ ತಡೆದರು. ಕೂಡಲೇ ಸನಕಾದಿ ಮುನಿಗಳು "ನೀವು ವಿಷ್ಣು ದ್ವಾರಪಾಲಕರಾಗಿರಲು ಅರ್ಹರಲ್ಲ, ರಾಕ್ಷಸ ರಾಗಿ ಹುಟ್ಟಿರಿ !" ಎಂದು ಶಪಿಸಿದರು.

ದ್ವಾರದ ಹತ್ತಿರ ನಡೆಯುವ ಕಲಕಲವನ್ನು ಕೇಳಿ ನಾರಾಯಣನು ಲಕ್ಷ್ಮಿಯೊಂದಿಗೆ ಅಲ್ಲಿಗೆ ಬಂದನು.





# ಕಾಜಿಯ ಮೋಸ

**ನೂ**ರಾರು ವರ್ಷಗಳ ಹಿಂದೆ ಘಜ್ನಿ ನಗರವನ್ನು ಸುಲ್ತಾನ್ ಮಹಮ್ಮದ್ ಪಾಲಿಸಿಕೊಂಡಿದ್ದನು. ಅವನ ಕಾಲದಲ್ಲಿ ಒಬ್ಬ ವರ್ತಕನು ಅಜರ್‌ಬೈಜಾನ್ನಿಂದ ಹಿಂದೂ ದೇಶಕ್ಕೆ ಪ್ರಯಾಣ ಮಾಡುತ್ತ ಘಜ್ನೀ ನಗರಕ್ಕೆ ಬಂದನು. ಆ ನಗರವು ಅವನಿಗೆ ತುಂಬಾ ಹಿಡಿಸಿತು. ಆದುದರಿಂದ ಅಲ್ಲಿಯೇ ಸ್ಥಿರವಾಗಿ ವೃತ್ತಿ ಹಿಡಿದುಕೊಂಡಿರಲು ನಿಶ್ಚಯಿಸಿದನು. ಅವನ ವ್ಯಾಪಾರವು ಚೆನ್ನಾಗಿ ಅನುಕೂಲಿಸಿಕೊಂಡು ಬರಲು, ಸ್ವಲ್ಪ ಕಾಲದೊಳಗೆ ಅವನು ಐಶ್ವರ್ಯವಂತನಾದನು. ತರುವಾಯ ಸುಗುಣೆಯೂ ಸುಂದರಿಯೂ ಆದ ಕನ್ಯೆಯನ್ನು ನೋಡಿ, ವಿವಾಹ ಮಾಡಿಕೊಂಡು ಸುಖವಾಗಿ ಇರತೊಡಗಿದನು.

ಹೀಗೆ ಕಾಲ ಕಳೆಯುತ್ತಿರುವಾಗ, ಅವನ ವರ್ತಕ ಪ್ರದೇಶವು ವಿಸ್ತರಿಸಿತು. ಬೇರೆ ದೇಶಗಳಿಗೂ ಹಬ್ಬಿತು. ಅವನ ಸರಕುಗಳು ಹಿಂದೂ ದೇಶಕ್ಕೂ ರವಾನೆಯಾಗ ತೊಡಗಿದುವು. ಒಂದುಸಾರಿ ಅವನು ಸರಕುಗಳ ಸಂಬಂಧದಲ್ಲಿ ವಸೂಲಿಗೂ, ಗಿರಾಕಿ ಶೇಖರಣೆಗೂ ಸ್ವತಃ ಹಿಂದೂ ದೇಶಕ್ಕೆ ಹೋಗ ಬೇಕಾಗಿ ಬಂತು.

ಅದು ದೀರ್ಘ ಪ್ರಯಾಣವಾದುದರಿಂದ ಒಂದು ವರ್ಷದ ವರೆಗೆ ಹಿಂದಿರುಗಲು ಸಾಧ್ಯವಾಗಲಿಕ್ಕಿಲ್ಲ ವೆನಿಸಿತು. ಅಷ್ಟರ ವರೆಗೆ ತನ್ನ ಹೆಂಡತಿಯನ್ನು ವಿಶ್ವಾಸಿಗಳಾದವರ ಆಶ್ರಯದಲ್ಲಿ ಇರಿಸಬೇಕೆಂದರೆ, ಘಜ್ನಿಯಲ್ಲಿ ಅವನ ಬಂಧುಗಳಾರೂ ಇರಲಿಲ್ಲ. ಯೋಚಿಸಿದಾಗ ಒಬ್ಬರೇ ಒಬ್ಬರು ನಂಬುಗೆಯವರಾಗಿ ಅವನ ಮನಸ್ಸಿಗೆ ತೋರಿತು.

ನಗರದಲ್ಲಿ ಒಬ್ಬ ಕಾಜೀ ಇದ್ದನು. ಅವನು ತುಂಬಾ ನೀತಿವಂತನೆಂದೂ, ಧರ್ಮಾತ್ಮನೆಂದೂ, ಎಲ್ಲರೂ ಹೇಳುತ್ತಿದ್ದರು. ಆ ಪ್ರಾಂತದನ್ಯಾಯಾಧಿಕಾರಿ ಕೂಡಾ ಆತನೇ ಎಂದೂ ಗೊತ್ತಾಯಿತು. ಆದುದರಿಂದ ವರ್ತಕನು ಆ ಕಾಜಿಯ ಬಳಿಗೆ ಹೋಗಿ, ತಾವು ಧರ್ಮಮೂರ್ತಿಗಳೆಂದು ಲೋಕವೆಲ್ಲಾ ಹೇಳುತ್ತಿದೆ. ನಾನು ವ್ಯಾಪಾರದ ಮೇಲೆ ಒಂದು ವರ್ಷ ದೇಶಾಂತರಗಳಿಗೆ ಹೋಗಬೇಕಾಗಿದೆ. ಅಷ್ಟರ ವರೆಗೆ ನನ್ನ ಹೆಂಡತಿಯನ್ನು ನಿಮ್ಮ ಮನೆಯಲ್ಲಿ ಇಟ್ಟುಕೊಂಡು ಕಾಪಾಡಬೇಕೆಂದು ನನ್ನ ಪ್ರಾರ್ಥನೆ. ಬೇರೆ ವಿಶ್ವಾಸಕರಾದವರಾರೂ ನನಗಿಲ್ಲ. ಅವಳಿಗಾಗುವ ಖರ್ಚುಗಳನ್ನೆಲ್ಲಾ ನಿಮ್ಮ ಹತ್ತಿರ ಕೊಟ್ಟೇ



ನಾನು ಹೊರಡುತ್ತೇನೆ. ಅಪ್ಪಣೆಯಾಗಬೇಕು" ಎಂದು ಕೇಳಿಕೊಂಡನು.

ಅದಕ್ಕೆ ಕಾಜೀ ಸಂತೋಷದಿಂದ ಒಪ್ಪಿದನು. ವರ್ತಕನು ತನ್ನ ಹೆಂಡತಿಯನ್ನು ಕಾಜೀಯ ಮನೆಯಲ್ಲಿ ಬಿಟ್ಟು, ಹೊರಟುಹೋದನು.

ವರ್ತಕನ ಹೆಂಡತಿ ಒಂದು ವರ್ಷದ ವರೆಗೆ ಕಾಜೀಯ ಮನೆಯಲ್ಲಿ ದೈವಧ್ಯಾನದಿಂದ ಹೊತ್ತು ಕಳೆದಳು. ಯಾವ ದುರ್ಘಟನೆಗಳೂ ನಡೆಯಲಿಲ್ಲ. ಆದರೆ ಕಡೇ ದಿನಗಳಲ್ಲಿ ಒಂದು ದಿನ ಕಾಜೀ ಅಕಸ್ಮಾತ್ತಾಗಿ ಅವಳನ್ನು ಒಮ್ಮೆ ನೋಡಿಬಿಟ್ಟನು. ಅವಳ ಸೌಂದರ್ಯವನ್ನು ನೋಡಿ ಕಾಜೀಗೆ ದಿಗ್ಭ್ರಾಂತಿ ಹಿಡಿಯಿತು. ತನ್ನ ಮನೆಯಲ್ಲೇ ಇರುವ ಅಂತಹ ಸುಂದರಿಯನ್ನು ಇಷ್ಟರ ವರೆಗೆ ನೋಡದೆ ಹೋದೆನಲ್ಲಾ ಎಂದು ತೋರಿತು. ಅವನ ಸದ್ಬುದ್ಧಿಗೆ ಮಣ್ಣು ಹಿಡಿಯಿತು. ವರ್ತಕನ ಹೆಂಡತಿಯನ್ನು ಹೇಗಾದರೂ ಮೋಸಪಡಿಸಬೇಕೆಂಬ ದುರ್ಬುದ್ಧಿ ಬಲವಾಗಿ ತಲೆಯೆತ್ತಿತು. ದುರ್ಬುದ್ಧಿಯ ವೇಗವನ್ನು ತಡೆಯಲು ಅವನ ಧರ್ಮಬುದ್ಧಿಯಿಂದಾಗಲಿಲ್ಲ.

ಒಂದು ದಿನ ಕಾಜೀಯು ಹೆಂಡತಿ ಮನೆಯನ್ನು ವರ್ತಕನ ಹೆಂಡತಿಯ ವಶಕ್ಕೆ ಬಿಟ್ಟು ಎಲ್ಲಿಗೋ ಹೋದಳು. ಈ ಸಂಗತಿ ಕಾಜೀಗೆ ಮೊದಲೇ ಗೊತ್ತಿದ್ದುದರಿಂದ, ಅವನು ಹೊತ್ತಲ್ಲದ ಹೊತ್ತಿನಲ್ಲಿ ನ್ಯಾಯಾಲಯದಿಂದ ಮನೆಗೆ ಬಂದು ಬಿಟ್ಟನು. ಅವನು ಸೀದಾ ವರ್ತಕನ ಹೆಂಡತಿ ಇರುವ ಕೋಣೆಗೆ ಹೋಗಿ, "ಏನು ಮಗೂ, ಚೆನ್ನಾಗಿದ್ದೀ ತಾನೇ ? ನಾನು ತುಂಬಾ ಪಾಪಭೀತಿಯುಳ್ಳವನೆಂದೂ, ಧರ್ಮ ಚಿಂತನೆಯಲ್ಲಿರುವವನೆಂದೂ ಲೋಕಕ್ಕೇ ಗೊತ್ತಿದೆ. ನನ್ನ ಇದಿರಿನಲ್ಲಿ ಸಂಕೋಚದ ಬುರುಖಾ ಬೇಕಾಗಿಲ್ಲ. ನನ್ನನ್ನು ನೋಡಿ ಹೆದರುವುದೆಂದರೆ ನನ್ನ ಮೇಲೆ ನಂಬುಗೆಯಿಲ್ಲವೆಂದೇ ಆಯಿತು. ಅದು ದೊಡ್ಡ ಅನ್ಯಾಯ" ಎಂದನು. ಈ ಮಾತಿನಿಂದ ವರ್ತಕನ ಹೆಂಡತಿಗೆ ಸ್ವಲ್ಪ ಧೈರ್ಯ ಬಂದಿತು.

"ನನಗೆ ಬಹಳ ಹಸಿವಾಗಿದೆ. ಭೋಜನ ಬಡಿಸುವಿಯಾ ?" ಎಂದು ಕಾಜೀ ವರ್ತಕನ ಹೆಂಡತಿಯನ್ನು ಕೇಳಿದನು.

ಅವಳು ಕಾಜೀಗೆ ಬಡಿಸಿ ಒಳಕ್ಕೆ ಹೋದಳು. ಆಗ ಕಾಜೀ ತನ್ನ ಹತ್ತಿರ ಮರೆಸಿಟ್ಟುಕೊಂಡಿದ್ದ ಮಯಕದ ಮದ್ದನ್ನು, ಬದಿಯಲ್ಲಿದ್ದ ಪಾತ್ರದ ಆಹಾರ ಪದಾರ್ಥಕ್ಕೆ ಕಲೆಸಿ, ವರ್ತಕನ ಹೆಂಡತಿಯನ್ನು ಕರೆದು, "ಮಗೂ, ನಾನೊಬ್ಬನೇ ಊಟ ಮಾಡುವುದು ಕಷ್ಟವಾಗಿದೆಯಲ್ಲಾ! ಇದುವರೆಗೆ ಒಬ್ಬನೇ ಕುಳಿತು ಊಟಮಾಡಿದವನಲ್ಲ, ನನ್ನ ಹತ್ತಿರ ಲಾಂಛನಕ್ಕಾಗಿಯಾದರೂ ನೀನೂ ಕುಳಿತು ಈ ಪಾತ್ರದ ಕಲಸು ಕೊಟು ನನ್ನೊಂದಿಗೆ ಸ್ವಲ್ಪ ತಿನ್ನು. ಏಕಾಂತ ಭೋಜನ ಮಹಾದೋಷ!" ಎಂದನು.

ಹಿರಿಯರ ಮಾತು ಮೀರುವುದು ಮರ್ಯಾದೆಯಲ್ಲವೆಂದುಕೊಂಡು ವರ್ತಕನ ಹೆಂಡತಿ, ಕಾಜೀ

ತೋರಿಸಿದ ಪಾತ್ರದಿಂದ ಎರಡು ಮೂರು ತುತ್ತು ತಿನ್ನುತ್ತಿದಂತೆ ಸ್ಮೃಹೆ ತಪ್ಪಿ ಬಿದ್ದುಬಿಟ್ಟಳು.

ಸರಿಯಾಗಿ ಅದೇ ಹೊತ್ತಿಗೆ ಮನೆಯೊಳಗೆ ಯಾರೋ ಬರುವ ಸದ್ದು ಕೇಳಿಸಿತು. ತಾನು ಮಾಡಿದ ಅನ್ಯಾಯದ ಕೆಲಸದಿಂದ ಕಾಜೀ ಸ್ತಂಭಿಸಿದನು, ಮರುಕ್ಷಣದಲ್ಲಿ ಹೆದರಿ ನಡುಗುತ್ತ: ವರ್ತಕನ ಹೆಂಡತಿಯನ್ನು ಎತ್ತಿಕೊಂಡು ಹೋಗಿ ಧನವನ್ನೂ, ನಗಗಳನ್ನೂ ಭದ್ರಪಡಿಸುವ ಮಾಳಿಗೆಯಲ್ಲಿಟ್ಟು ಈಚೆಗೆ ಬಂದನು.

ಬಾಗಿಲು ತೆರೆದು ನೋಡಿದಾಗ ಗಾಡಿಯಿಂದಿಳಿದು ಕಾಜೀಯ ಹೆಂಡತಿಯೂ ಮಕ್ಕಳೂ ಆಗಲೇ ಬಾಗಿಲ ಹತ್ತಿರ ಬಂದಿದ್ದರು.

ಕಾಜೀ ಅವಳನ್ನು ನೋಡಿದ ಕೂಡಲೇ ಕೋಪವನ್ನು ಅಭಿನಯಿಸುತ್ತ "ಮನೆಯನ್ನು ಗಾಳಿಯ ವಶಕ್ಕೆ ಬಿಟ್ಟು ಮಕ್ಕಳನ್ನು ಕಟ್ಟಿಕೊಂಡು ಹೀಗೋ ಹೋಗುವುದು ? ಎಲ್ಲೆಲ್ಲ ಸುತ್ತಿ ಬಂದ್ರಿ?" ಎಂದು ಕೇಳಿದನು.

"ಮನೆ ನೋಡುತ್ತಾ ಇರು ಅಂತ ವರ್ತಕನ ಹೆಂಡ್ತೀ ಹತ್ರ ಹೇಳಿದ್ದೆನಲ್ಲ ?" ಎಂದಳು ಕಾಜೀಯ ಹೆಂಡತಿ ಹೆದರುತ್ತ.

"ನಾನು ಬಂದು ಒಂದು ಗಂಟೆಯಾಯಿತು. ಕೇಳುವವರೇ ಇಲ್ಲ ಮನೆಯಲ್ಲಿ! ಹೀಗೆ ಪರಕೀಯರನ್ನು ವಿಪರೀತ ನಂಬಿ ಬಿಡೋದೇನಾ? ನೋಡು. ಮನೆಯೊಳಗೆ ಏನೇನು ಹೋಗಿದೆಯೋ !" ಎಂದನು ಕಾಜೀ.

ಕಾಜೀಯ ಹೆಂಡತಿ ಮಕ್ಕಳಿಗೆ ಬಹಳ ಆಶ್ಚರ್ಯವಾಯಿತು. ವರ್ತಕನ ಹೆಂಡ್ತಿ ಎಷ್ಟು ಒಳ್ಳೆಯವಳೆಂದು ಅವರಿಗೆಲ್ಲಾ ಚೆನ್ನಾಗಿ ಗೊತ್ತು. ಕಾಜೀ ಕೂಡಾ ಈವರೆಗೂ ಅವಳ ಮೇಲೆ ನಂಬುಗೆ ಇಲ್ಲದವನಂತೆ ಉಸಿರೆತ್ತಲಿಲ್ಲ. ಅಂತಹ ತನ್ನ ಗಂಡನು ಈಗೇಕೆ ಹೀಗೆ ಹೇಳುವನೋ!

ಇವರು ಹಾಗೆ ಮಾತಾಡಿಕೊಂಡಿರುವಾಗಲೇ ವರ್ತಕನು ಕೂಡಾ ಹಿಂದೂ ದೇಶದಿಂದ ಆ ದಿನವೇ ಹಿಂದಿರುಗಿ ಬಂದುಬಿಟ್ಟನು.





ವರ್ತಕನು ಅತ್ಯಾತುರದಿಂದ ಕಾಜೀಯ ಬಳಿಗೆ ಬಂದು, "ಕೆಲಸ ಮುಗಿಯಿತು. ನನ್ನ ಹೆಂಡತಿಯನ್ನು ಕರೆದೊಯ್ಯುತ್ತೇನೆ. ಇಷ್ಟು ಕಾಲ ಕಾಪಾಡಿದ್ದಕ್ಕೆ ತುಂಬಾ ಕೃತಜ್ಞತೆಗಳು" ಎಂದನು.

"ನಿನ್ನ ಹೆಂಡತಿ ಇಲ್ಲಿ ಎಲ್ಲಿದ್ದಾಳೆ? ಹೇಳದೆ ಕೇಳದೆ ಎಲ್ಲಿಗೋ ಹೋದಳು" ಎಂದನು ಕಾಜೀ.

"ಕಾಜೀಯವರು ಹಾಸ್ಯ ಮಾಡುವಿರಿ. ದಯವಿಟ್ಟು ನನ್ನ ಹೆಂಡತಿಯನ್ನು ಕರೆಯಿಸಿರಿ" ಎಂದನು ವರ್ತಕ.

"ಹಾಸ್ಯವೇನಿಲ್ಲ. ನಿಜವೇ ಹೇಳುತ್ತಿದ್ದೇನಪ್ಪಾ" ಎಂದನು ಕಾಜೀ.

"ನನ್ನ ಹೆಂಡತಿ ಅಂತಹ ಕೆಲಸ ಎಂದಿಗೂ ಮಾಡಳು. ಇದರಲ್ಲಿ ಏನೋ ಮೋಸವಿದೆ!" ಎಂದನು ವರ್ತಕ.

ಕಾಜೀ ಕೋಪವನ್ನು ಅಭಿನಯಿಸುತ್ತ, "ಬುದ್ಧಿಗೆಟ್ಟವನೇ! ಅನ್ಯಾಯ ನಡೆದದ್ದು ನನಗೆ! ಕಾರಣವಿಲ್ಲದೆ ನನ್ನನ್ನು ನಿಂದಿಸದೆ ನಿನ್ನ ಹೆಂಡತಿ ಏನಾದಳು, ಯಾವ ದೇಶಕ್ಕೆ ಹೋದಳು ಎಂದು ಹುಡುಕಿಕೋ, ಹೋಗು!" ಎಂದನು.

ವರ್ತಕನು ನೆಟ್ಟಗೆ ಸುಲ್ತಾನನ ಬಳಿಗೆ ಹೋಗಿ ನಡೆದ ಸಮಾಚಾರವನ್ನೆಲ್ಲಾ ಹೇಳಿ, ಕಾಜೀಯ ಮೇಲೆ ಫಿರ್ಯಾದಿ ಮಾಡಿಕೊಂಡನು.

ಸುಲ್ತಾನನು ಕಾಜೀಯನ್ನು ಕರೆಯಿಸಿ ನಡೆದ ಸಂಗತಿ ಏನೆಂದು ಕೇಳಿದನು.

ಮೂರು ತಿಂಗಳ ಕೆಳಗೇ ವರ್ತಕನ ಹೆಂಡತಿ ಮನೆಯಲ್ಲಿ ಯಾರಿಗೂ ಹೇಳದೆ ಹೊರಟು ಹೋದಳೆಂದೂ, ಎಷ್ಟು ಹುಡುಕಿಸಿದರೂ ಅವಳ ಸುದ್ದಿ ತಿಳಿಯಲಿಲ್ಲವೆಂದೂ ಕಾಜೀ ಸುಲ್ತಾನನೊಂದಿಗೆ ಬಿನ್ನವಿಸಿಕೊಂಡನು.

"ನನ್ನ ಹೆಂಡತಿ ಹಾಗೆ ಮಾಡುವವಳೇ ಅಲ್ಲ. ಕಾಜೀ ಹೇಳುವುದು ಸುಳ್ಳು" ಎಂದನು ವರ್ತಕ.

ಸಾಕ್ಷಿಗಳನ್ನು ಕರೆದುಕೊಂಡು ಬರುವಂತೆ ಸುಲ್ತಾನನು ಕಾಜೀಗೆ ಹೇಳಿದನು. ಕಾಜೀ ಹೋಗಿ ತನ್ನ ನೆರೆಹೊರೆಯಲ್ಲಿರುವ ಅಲ್ಪಬುದ್ಧಿಯವರಿಗೆ ಲಂಚಕೊಟ್ಟು, ಸಾಕ್ಷಿಗಳನ್ನಾಗಿ ಮಾಡಿ ತಂದನು. ಅವರೆಲ್ಲಾ ಕಾಜೀ ಹೇಳಲು ಹೇಳಿದ ಹಾಗೆಯೇ ಸಾಕ್ಷಿ ಹೇಳಿದರು.

ಕಡೆಗೆ ಸುಲ್ತಾನನು ವರ್ತಕನ ಫಿರ್ಯಾದಿಯನ್ನು ತಳ್ಳಿ ಹಾಕಿಬಿಟ್ಟನು. ವರ್ತಕನು ಹತಾಶನಾಗಿ ದೊಡ್ಡ ಚಿಂತೆಗೆ ಬಿದ್ದನು.

ಸುಲ್ತಾನ್ ಮಹಮ್ಮದನಿಗೆ ಒಂದು ಅಭ್ಯಾಸ ವಿದ್ದಿತು. ಅವನು ಸಾಮಾನ್ಯ ಪೌರರ ಹಾಗೆ ದುಸ್ತು ಧರಿಸಿಕೊಂಡು ಬೀದಿಗಳಲ್ಲಿ ತಿರುಗುತ್ತ ಪ್ರಜೆಗಳು ಮಾತಾಡಿಕೊಳ್ಳುವುದನ್ನು ಕೇಳುತ್ತಿದ್ದನು. ಹಾಗೆಯೇ ಅವನು ಆ ದಿನ ರಾತ್ರಿ ನಗರ ಪರ್ಯಟನೆಗೆ ಹೊರಟನು. ಅವನು ಒಂದು ಅಂಗಡಿಯ ಹತ್ತಿರ ಬಂದಾಗ, ಕೆಲವು ಹುಡುಗರು ಆಟವಾಡುವುದು ಕಂಡಿತು. ಅವರಲ್ಲಿ ಒಬ್ಬ ಹುಡುಗನು ಇನ್ನೊಬ್ಬನನ್ನು

ರಾಜನನ್ನಾಗಿ ಮಾಡಿ, "ಎಲೋ, ನೀನು ನಮ್ಮ ಸುಲ್ತಾನ್ ಮಹ್ಮದರ ಹಾಗೆ ಕಣ್ಣು ಮುಚ್ಚಿ ತೀರ್ಪು ಹೇಳಿಬಿಟ್ಟರೆ, ನಿನ್ನನ್ನು ಸಿಂಹಾಸನದಿಂದ ಎಳೆದು ಹಾಕೇನು. ಜಾಗ್ರತೆ!" ಎಂದನು.

ಸುಲ್ತಾನನು ಆ ಮಾತು ಕೇಳಿ ಬೆರಗಾಗಿ, ಹಾಗೆ ಹೇಳಿದ ಹುಡುಗನ ಹತ್ತಿರ ಹೋಗಿ, "ಸುಲ್ತಾನ್ ಮಹಮ್ಮದನ ತೀರ್ಪುಗಳು ಸರಿಯಾಗಿರುವುದಿಲ್ಲ ವೇನು ?" ಎಂದು ಕೇಳಿದನು.

"ನಾವು ಆಗಾಗ ಸುಲ್ತಾನರ ಸಭೆಗೆ ಹೋಗೋ ದುಂಟು. ಇವತ್ತು ಸುಲ್ತಾನರು ಕೊಟ್ಟ ತೀರ್ಪು ಹೇಗಿತ್ತು ! ಕಾಜೀ ತಂದ ಸಾಕ್ಷಿಗಳು ಎಂಥವರು ? ಬುದ್ಧಿಯುಳ್ಳವರಾರಾದರೂ ಆ ಸಾಕ್ಷಿಗಳನ್ನು ನಂಬು ತ್ತಾರೆಯೇ ?" ಎಂದನು ಹುಡುಗ.

ಮರುದಿನ ಬೆಳಿಗ್ಗೆ ಸುಲ್ತಾನನು ಆ ಹುಡುಗ ನನ್ನು ತನ್ನ ಬಳಿಗೆ ಕರೆಯಿಸಿ, "ಈ ದಿನ ತೀರ್ಪು ನೀನೇ ಹೇಳು, ನಿನ್ನೆಯ ಫಿರ್ಯಾದಿಯನ್ನೇ ಮತ್ತೆ ತರಿಸುತ್ತೇನೆ" ಎಂದನು.

ಅದರಂತೆ ಹುಡುಗನನ್ನು ನ್ಯಾಯಪೀಠದಲ್ಲಿ ಕೂಡಿಸಿದನು. ನಿನ್ನೆಯ ಫಿರ್ಯಾದಿಯ ವಿಷಯವೇ ಮತ್ತೆ ಬಂತು. ನಿನ್ನೆ ಕಾಜೀ ಪರವಾಗಿ ಸಾಕ್ಷಿ ಹೇಳಿದ ಒಬ್ಬೊಬ್ಬನನ್ನೇ ಹುಡುಗನು ಕರೆದು, "ನೀನು ವರ್ತಕನ ಹೆಂಡತಿಯನ್ನು ನೋಡಿದೆಯಾ ? ಅವಳ ವಯಸ್ಸೆಷ್ಟು ? ಹೇಗಿರುತ್ತಾಳೆ ? ಮೈಬಣ್ಣ ಯಾವುದು ?" ಎಂದು ಪ್ರಶ್ನೆ ಮಾಡಿದನು.

ಸಾಕ್ಷಿಗಳು ವರ್ತಕನ ಹೆಂಡತಿಯನ್ನು ನೋಡಿದ ವೆಂದರೇ ಹೊರತು ವಯಸ್ಸೂ, ವರ್ಣನೆಯೂ ಒಬ್ಬೊಬ್ಬನು ಒಂದೊಂದು ವಿಧವಾಗಿ ಹೇಳಿದನು.

"ನೀವು ನಿಜ ಹೇಳುವಿರಾ ? ಕೊರಡೇ ಏಟು ತಿನ್ನುವಿರಾ ?" ಎಂದು ಹುಡುಗನು ಸಾಕ್ಷಿಗಳನ್ನು ಕೇಳಿದನು.

ಕೂಡಲೇ ಅವರೆಲ್ಲರೂ ಹುಡುಗನ ಕಾಲಿಗೆ ಬಿದ್ದು, "ಕ್ಷಮಿಸಬೇಕು, ನಮಗೇನೂ ತಿಳಿಯದು. ನಾವು ನೋಡೇ ಇಲ್ಲ. ಕಾಜೀರವರು ಹೇಳಿದಂತೆ ಹೇಳಿ ದೆವು, ಅಷ್ಟೇ" ಎಂದು ಒಪ್ಪಿಕೊಂಡರು.

ಆಮೇಲೆ ಕಾಜೀ ನಿಜಹೇಳದೆ ತಪ್ಪಲಿಲ್ಲ. ವರ್ತ ಕನ ಹೆಂಡತಿಯನ್ನು ರಹಸ್ಯ ಮಾಳಿಗೆಯಿಂದ ರಕ್ಷಿಸಿ ವರ್ತಕನಿಗೆ ಕೊಡಿಸಲಾಯಿತು. ಸುಲ್ತಾನನು ಕಾಜೀಗೆ ದೇಶ ಬಹಿಷ್ಕಾರ ಹಾಕಿ, ಆತನ ಆಸ್ತಿಯನ್ನೆಲ್ಲಾ ವರ್ತಕನಿಗೇ ಕೊಡಿಸಿದನು.

ತನ್ನಿಂದಾಗದ ನ್ಯಾಯವನ್ನು ಎತ್ತಿ ಹಿಡಿದ ಹುಡುಗನನ್ನೇ ಸುಲ್ತಾನನು ತನ್ನ ಹತ್ತಿರವೇ ಇಟ್ಟು ಕೊಂಡು, ಚೆನ್ನಾಗಿ ಓದಿಸಿ, ಕಾಲಕ್ರಮದಲ್ಲಿ ಅವನನ್ನು ಮಂತ್ರಾಲೋಚಕನನ್ನಾಗಿ ಮಾಡಿ ದರಬಾರಿನಲ್ಲಿ ಇಟ್ಟುಕೊಂಡನು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೩ ಜುಲೈ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



Chandrapal Singh



K. S. Vijayaker

* ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
* ಮೇ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
* ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂ. ೫೦ ಬಹುಮಾನ.
* ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಮಾರ್ಚಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ನೂರಾರು ಕಣ್ಣುಗಳಿದ್ದರೂ

ಎರಡನೇ ಫೋಟೋ : ನೋಡೋದು ಎರಡೇ ಕಣ್ಣು

ಕಳುಹಿಸಿದವರು : ನಾಗಮಣಿ, ಪಾರ್ವತಿ ನಿಲಯ, ಬೆಂಗಳೂರು-೧೯.

ಬಹುಮಾನ ರೂ. ೫೦/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.